

ಎಂದಿದ್ದರೀಕೊಂಪೆ ಎನಗೆ ನಂಬಿಕೆಯಿಲ್ಲ
ಮುಂದರಿತು ಹರಿಪಾದ ಹೊಂದುವುದು ಲೇಸು ||ಪ||

ಎಲುವುಗಳು ತೊಲೆ - ಜಂತಿ ನರಗಳವು ಬಿಗಿದಂತೆ
ಬಲಿದ ಚರ್ಮವು ಮೇಲು ಹೊದಿಕೆಯಂತೆ
ಗಳಗಳನೆ ನುಡಿವ ನಾಲಗೆ ಗಂಟೆಯಂತೆ
ಕೆಲ ಕಾಲಕೀ ಕೊಂಪೆ ಕಡೆಗಾಹುದಂತೆ ||೧||

ಕಂಡಿಗಳು ಒಂಬತ್ತು ಕಳಬಂಟರೈವರು
ಅಂಡಲೆವುದೊತ್ತಿನಲಿ ಷಡ್ವರ್ಗವು
ಮಂಡಲಕೆ ಹೊಸಪರಿಯು ಮನ್ಮಥನ ಠಾಣ್ಯವಿದು
ಮಂಡೆ ಹೋಗುವುದನ್ನು ಅರಿಯದೀ ಕೊಂಪೆ ||೨||

ಕೊಂಪೆಯಲಿ ಶೃಂಗಾರ ಕೊಂಡಾಡಲಳವಲ್ಲ
ಕೆಂಪು ಬಣ್ಣಗಳಿಂದ ಚೆನ್ನಾಯಿತು
ಇಂಪಿನಲಿ ಕಾಗಿನೆಲೆಯಾದಿ ಕೇಶವನನ್ನು
ಸೊಂಪಿನಲಿ ನೆನೆದು ಸುಖಿಯಾಗೊ ಮನುಜಾ ||೩||

--ಶ್ರೀ ಕನಕದಾಸರು.

ಸಂದರ್ಶಿಸಿ. ಆನಂದಿಸಿ.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ
# ತಿರುಮಲೆ



## ವಾರ್ಷಿಕ ತೆಪ್ಪೋತ್ಸವ

12--3--95 ರಿಂದ 16--3--95 ವರೆಗೆ

| | | |
|---|---|---|
| 12--3--95 | ಭಾನುವಾರ | ಶ್ರೀ ಕೋದಂಡರಾಮಸ್ವಾಮಿ ತೆಪ್ಪೋತ್ಸವ. |
| 13--3--95 | ಸೋಮವಾರ | ಶ್ರೀಕೃಷ್ಣಸ್ವಾಮಿ ತೆಪ್ಪೋತ್ಸವ. |
| 14--3--95 | ಮಂಗಳವಾರ | ಶ್ರೀ ವೆಂಕಟೇಶ್ವರಸ್ವಾಮಿ ತೆಪ್ಪೋತ್ಸವ. |
| 15--3--95 | ಬುಧವಾರ | ಶ್ರೀ ವೆಂಕಟೇಶ್ವರಸ್ವಾಮಿ ತೆಪ್ಪೋತ್ಸವ. |
| 16--3--95 | ಗುರುವಾರ | ಶ್ರೀ ವೆಂಕಟೇಶ್ವರಸ್ವಾಮಿ ತೆಪ್ಪೋತ್ಸವ. |

ಫಾಲ್ಗುಣ ಪೂರ್ಣಿಮೆಯ ಹಿಂದು ಮುಂದಿನ ದಿನಗಳಲ್ಲಿ ನಡೆಯುವ ತೆಪ್ಪೋತ್ಸವ ನಯನಾನಂದಕರ.

ತಾವೂ ಬನ್ನಿ. ತಿ. ತಿ. ದೇ. ತಮ್ಮವರನ್ನೂ ಕರೆತನ್ನಿ.





ಸಂಪುಟ -- 25 ಫೆಬ್ರವರಿ 1995 ಸಂಚಿಕೆ -- 9

# ವಿಷಯಸೂಚಿ



ಮುಖ ಚಿತ್ರ: ಶ್ರೀಶೈಲ ಶ್ರೀಮಲ್ಲಿಕಾರ್ಜುನಸ್ವಾಮಿ.

ಹಿಂಬದಿಯಲ್ಲಿ: ಶ್ರೀಶೈಲ ಶ್ರೀ ಭ್ರಮರಾಂಬಿಕಾದೇವಿ.

ಒಳಗಡೆ: ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವ.

ಶ್ರೀ ಕಪಿಲೇಶ್ವರಸ್ವಾಮಿ ಕಪಿಲತೀರ್ಥ.

# ಸಂಪಾದಕೀಯ



ತಿರುಮಲೆಯ ದೈವ ಶ್ರೀನಿವಾಸನ ಭಕ್ತ ಸಾಮ್ರಾಜ್ಯ ಹಿರಿದು. ಇಲ್ಲಿಗೆ ದಿನವೂ 40 ರಿಂದ 60 ಸಾವಿರ ಮಂದಿ ಯಾತ್ರಿಕ ಭಕ್ತರು ಬರುತ್ತಾರೆ ಎಂಬ ಒಂದು ಮಾತೇ ಸಾಕು -- ಅವರ ದೈನಂದಿನ ಅವಶ್ಯಕತೆಗಳ ಅಗಾಧತೆಯನ್ನು ಅಂದಾಜು ಮಾಡಲು. ಬಂದು ಹೋಗುವವರಿಗೆ ಬೆಳಗಿನಿಂದ ಸಂಜೆಯವರೆಗಿನ ಕನಿಷ್ಠ ಸೌಲಭ್ಯಗಳು, ಇಲ್ಲಿ ಬಂದು ಉಳಿಯಬಯಸಿದರೆ ವಸತಿಯ ಸೌಲಭ್ಯ, ಜೊತೆಗೇ ಎಲ್ಲಕ್ಕಿಂತ ಮಿಗಿಲಾಗಿ ಈ ಎಲ್ಲ ಮಂದಿಯೂ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಶಾಂತಿ ಸೌಹಾರ್ದಗಳಿಂದ, ಭಕ್ತಿಯಿಂದ ದರ್ಶಿಸುವ ಒಂದು ವ್ಯವಸ್ಥೆ - ಎಲ್ಲವನ್ನೂ ಗಮನಿಸಲು, ದಿನ ದಿನವೂ ಸ್ವಾಮಿ ಸೇವೆಯಲ್ಲಿ ಲೋಪವಾಗದಂತೆ, ಪರಂಪರಾಗತ ದೈವೀ ವಾತಾವರಣವನ್ನು ಕಾಪಾಡಲು ಒಂದು ವ್ಯವಸ್ಥೆ - ಸೇವಾ ಕೈಂಕರ್ಯಪರರ ಸೇನೆಯೇ ಇರಬೇಕು. ಅದಕ್ಕೆ ಮುಖ್ಯಸ್ಥರಾಗಿ ನಾಯಕರಾಗಿ ನಿರ್ದೇಶಿಸುವ, ನಡೆಯುವ, ನಡೆಸುವ ಹೊಣೆ ಜವಾಬುದಾರಿ ಕಾರ್ಯನಿರ್ವಹಣಾಧಿಕಾರಿಯದು. ಅದಕ್ಕೆಂದೇ ಒಬ್ಬ ಐ.ಎ.ಎಸ್. ಅಧಿಕಾರಿಯನ್ನು ಆಂಧ್ರಪ್ರದೇಶದ ಸರ್ಕಾರ ನೇಮಕ ಮಾಡುವ ಸಂವಿಧಾನದ ರೂಪ ಕಲ್ಪನೆ.

ತಿ.ತಿ.ದೇ. ಗಳಿಗೆ ಕಾರ್ಯನಿರ್ವಹಣಾಧಿಕಾರಿಗಳಾಗಿ ಬರುವ ಐ.ಎ.ಎಸ್. ಅಧಿಕಾರಿಗಳು ಇಲ್ಲಿಯೇ ನಿಲ್ಲುವಂತೆಯೂ ಇಲ್ಲ. ಇತರರಿಗೆ ಇದ್ದಂತೆಯೇ ಇವರಿಗೂ ವರ್ಗಾವಣೆಗಳಿವೆ. ಈಗ ಎರಡು ವರ್ಷಕಾಲ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಯಾಗಿ ಕೆಲಸವನ್ನು ನಿರ್ವಹಿಸಿದ ಶ್ರೀ ಡಿ.ವಿ.ಎಲ್.ಎನ್. ಮೂರ್ತಿ ಅವರು ಬೇರೆ ಇಲಾಖೆಯ ಮುಖ್ಯಸ್ಥರಾಗಿ ವರ್ಗಾವಣೆ ಪಡೆದಿದ್ದಾರೆ. ಅವರ ಸ್ಥಳಕ್ಕೆ ಶ್ರೀ ಎನ್. ರಮೇಶಕುಮಾರ್ ಅವರು ಆಗಮಿಸಿದ್ದಾರೆ.



ಶ್ರೀ ಡಿ. ವಿ. ಎಲ್. ಎನ್. ಮೂರ್ತಿ ಅವರು ಕ್ರಮಾಗತವಾಗಿ ಮೇಲೇರಿದವರು. ಅವರಿಗೆ ಅಪಾರವಾದ ಭಗವದ್ಭಕ್ತಿ. ಜೊತೆಗೇ ಆಡಳಿತ ನಿಯಮಾವಳಿಯಲ್ಲೂ ಆಸಕ್ತಿ ಹೆಚ್ಚು. ಇದರಿಂದಾಗಿ ಯಾತ್ರಿಕರಿಗೆ ದುಪ್ಪಟ್ಟು ಅನುಕೂಲಗಳಾದವು ಅವರ ಎರಡು ವರ್ಷದ ಆಡಳಿತದಲ್ಲಿ ಎಂಬುದೂ ನಿಜ. ತಿರುಮಲೆಯ ಸ್ವಾಮಿಗೆ ದೇಶದಲ್ಲಿಯೇ ಹೆಸರಾದ ಚಿನ್ನದ ರಥ ತಯಾರಿಕೆಯಾಗಿ ಸಮರ್ಪಿತವಾಯಿತು. ಇವರ ಕಾಲದಲ್ಲಿ ತಿರುಮಲೆ, ಬೆಂಗಳೂರು, ಕೊಲ್ಹಾಪುರಗಳಲ್ಲಿ ವಿವಿಧ ಯಜ್ಞಗಳ ನಿರ್ವಹಣೆಯೂ ಆದವು. ವಿವಿಧ ರೀತಿಯ ವಸತಿ ಸೌಕರ್ಯವನ್ನೂ, ಯಾತ್ರಿಕ ಸೇವಾ ವಿಧಾನದ ಮಟ್ಟವನ್ನೂ ಹೆಚ್ಚಿಸಲು ನಿರಂತರ ಕೃಷಿ ಮಾಡಿದರು ಎಂಬುದನ್ನು ಮರೆಯಲಾಗದು. ಉದ್ಯೋಗಿಗಳಿಗೂ ಹೆಚ್ಚಿನ ಸೌಲಭ್ಯಗಳನ್ನು ಕಲ್ಪಿಸಿ ಅವರ ಉದ್ಯೋಗ ವಿಷಯದಲ್ಲಿ ಆಸಕ್ತಿ ಹೆಚ್ಚುಗೊಳಿಸಿದರು. ಇವೆಲ್ಲ ಒಂದೆಡೆಯಾದರೆ ಸಪ್ತಗಿರಿಯ ಗೌರವ ಸಂಪಾದಕರಾಗಿ ಅವರು ಸಪ್ತಗಿರಿಯನ್ನು ಕಾಲಕ್ಕೆ ತಕ್ಕಂತೆ ತರುವಲ್ಲಿಯೂ, ರಂಗುರಂಗಿನ ಮುಖಚಿತ್ರ ಮಧ್ಯ ವಿಸ್ತೃತಿಗಳನ್ನು ನೀಡುವಲ್ಲಿಯೂ ಉತ್ಸಾಹವನ್ನು ತೋರಿದರು ಎಂಬುದು ಇನ್ನೊಂದೆಡೆ.

ಇಂತಹವರಿಗೆ ಸ್ಟಾಂಪ್ಸ್ ಅಂಡ್ ರಿಜಿಸ್ಟ್ರೇಷನ್ ಇಲಾಖೆಗೆ ವರ್ಗವಾಗಿದೆ. ಅವರಿಗೆ ಸಪ್ತಗಿರೀಶನ ಆಶೀರ್ವಾದ ದೊರೆಯಲಿ ಬಾಳು ಸುಖಕರವಾಗಲಿ ಎಂದು ಹಾರೈಸುತ್ತ ಸಪ್ತಗಿರಿ ಅವರನ್ನು ಬೀಳ್ಕೊಡುತ್ತದೆ.



ಹೊಸದಾಗಿ ಕಾರ್ಯನಿರ್ವಹಣಾಧಿಕಾರಿಯಾಗಿ ಬಂದಿರುವ ಶ್ರೀ ಎನ್. ರಮೇಶಕುಮಾರ್ ಅವರು ನಿಜಕ್ಕೂ ತಿ.ತಿ.ದೇ. ಗಳಿಗೆ ಅಷ್ಟೊಂದು ಹೊಸಬರೇನಲ್ಲ. ಈ ಹಿಂದೆ ಐ.ಎ.ಎಸ್. ಅಧಿಕಾರಿಯಾಗಿ ತಿ.ತಿ.ದೇ. ಸಂಯುಕ್ತ ಕಾರ್ಯನಿರ್ವಹಣಾಧಿಕಾರಿಯಾಗಿ ಕೆಲಸ ನಿರ್ವಹಿಸಿದವರೇ ಹೌದು. ಅವರಿಗೆ ತಿ.ತಿ.ದೇ. ಗಳ ದೈನಂದಿನ ಅಗತ್ಯಗಳು, ಯಾತ್ರಿಕರ ಅವಶ್ಯಕತೆಗಳು ಈಗಾಗಲೇ ಮನವರಿಕೆಯಾಗಿದ್ದು, ಈ ಹಿಂದೆಯೇ ಸಮಸ್ಯೆಗಳ ಪರಿಷ್ಕಾರಕ್ಕಾಗಿ ದುಡಿದಿದ್ದವರು. ಸೇವಾಸೌಲಭ್ಯದ ಮಟ್ಟವನ್ನು ಹೆಚ್ಚಿಸುವಲ್ಲಿ ಕಂಪ್ಯೂಟರ್‌ಗಳನ್ನು ಬಳಸುವ ಯೋಜನೆಗಳನ್ನು ತಯಾರಿಸಿದ್ದ ಅವರಿಂದ ಯಾತ್ರಿಕರು ಹೆಚ್ಚಿನದನ್ನು ನಿರೀಕ್ಷಿಸಬಹುದಾಗಿದೆ.

ಉತ್ಸಾಹಿಗಳೂ, ಪರಿಪೂರ್ಣತೆಯ ದಾರಿಯಲ್ಲಿ ನಡೆಯುವ ಇಚ್ಛೆ ಇರುವವರೂ, ತಿರುಮಲೆಯನ್ನು ಆದರ್ಶ ತೀರ್ಥ ಕ್ಷೇತ್ರವನ್ನಾಗಿ ತಿದ್ದುವ ಅಭಿಲಾಷೆ ಇರುವವರೂ ಆದ ಅವರನ್ನು ಗೌರವ ಸಂಪಾದಕರೂ ಆಗಬೇಕೆಂದು ಸಪ್ತಗಿರಿ ಹಾರ್ದಿಕವಾಗಿ ಸ್ವಾಗತಿಸುತ್ತದೆ.

* * * * *

# ಶಿವರಾತ್ರಿ



ಶ್ರೀಕಾಳಹಸ್ತೀಶ್ವರಸ್ವಾಮಿ.

ರಾತ್ರಿಯೊಳು ಶಿವರಾತ್ರಿ
ಜಾತ್ರೆಯೊಳು ಶ್ರೀಶೈಲ
ಗಾತ್ರದೊಳು ಚೆಲುವ
ಮಲ್ಲಿಕಾರ್ಜುನ ಶಿವತತ್ತ್ವ
ಸ್ತೋತ್ರಗಳೊಳದಿಕ ಸರ್ವಜ್ಞ

ಎಂದು ಸರ್ವಜ್ಞಕವಿಯು ಶಿವರಾತ್ರಿಯನ್ನು ಪ್ರಶಂಸಿಸಿದ್ದಾನೆ. ದಿನವೆಲ್ಲಾ ಅಂದರೆ ಸತತ ೨೪ ಗಂಟೆಗಳ ಕಾಲ ಆಚರಿಸುವ ಏಕೈಕ ವ್ರತವೆಂದರೆ ಮಹಾಶಿವರಾತ್ರಿಯೊಂದೇ. 'ನವರಾತ್ರಿ'ಯಲ್ಲಿ ಹಗಲು ಪೂಜೆ ಅಥವಾ ಪ್ರದೋಷಕಾಲದಲ್ಲಿ ಅರ್ಚನೆಯೇ ವಿನಾ ರಾತ್ರಿ ಅರ್ಚನೆಯಿಲ್ಲ. ಶಿವೋಪಾಸನೆಗೆ ಪರಮಶ್ರೇಷ್ಠವಾದ ದಿನ ಮಹಾಶಿವರಾತ್ರಿ.

ಶೈವೋ ವಾ ವೈಷ್ಣವೋ ವಾಪಿ
ಯೋ ವಾಸ್ಯಾತ್ ಅನ್ಯಪೂಜಕಃ
ಸರ್ವಪೂಜಾಂ ಫಲಂ ಹಂತಿ
ಶಿವರಾತ್ರೀ ಬಹಿರ್ಮುಖಃ

ಎಂಬ ವಚನಾನುಸಾರ ಶೈವನಾಗಲಿ, ವೈಷ್ಣವನಾಗಲಿ ಶಿವರಾತ್ರಿ ವ್ರತವನ್ನು ಆಚರಿಸದಿದ್ದರೆ ಅವನು ಮಾಡುವ ಇತರ ದೇವತೆಗಳ ಆರಾಧನೆಯು ವ್ಯರ್ಥವಾಗುತ್ತದೆ. ಕಾರಣ ವಿಷ್ಣುವೂ ಸಹ ಶಿವನ ಆರಾಧಕನೇ. ಇದರ ಬಗ್ಗೆ ಒಂದು ಇತಿಹಾಸವಿದೆ. ಪ್ರತಿದಿನ ಮಹಾವಿಷ್ಣುವು ಶಿವನಿಗೆ ಒಂದು ಸಾವಿರ ತಾವರೆ ಹೂಗಳನ್ನು ಸಮರ್ಪಿಸಿ ಪೂಜಿಸುತ್ತಿದ್ದನು. ಆದರೆ ಒಂದು ದಿನ ಒಂದು ಕಮಲವು ಕಡಿಮೆಯಾಯಿತು. ಆಗ ವಿಷ್ಣುವು ತಾವರೆಯಂತಿರುವ ತನ್ನ ಕಣ್ಣನ್ನೇ ಕಿತ್ತು ಶಿವನಿಗರ್ಪಿಸಿದ. ಅವನ ಭಕ್ತಿಗೆ ಪ್ರಸನ್ನನಾದ ಶಿವನು ವಿಷ್ಣುವಿಗೆ ಸುದರ್ಶನ ಚಕ್ರವನ್ನೂ, ದಿವ್ಯ ಕವಚವನ್ನೂ ನೀಡಿ ತ್ರಿಲೋಕ ರಕ್ಷಕನಾಗಿರುವಂತೆ ಅನುಗ್ರಹಿಸಿದನು.

ಅದರಂತೆ ಶಿವನೂ ಸಹ ಮಹಾವಿಷ್ಣುವಿನ ಪೂಜಕನೇ. ಇವರಿಬ್ಬರಲ್ಲಿ ಯಾವ ಭೇದವೂ ಇಲ್ಲ. "ಶಿವಸ್ಯ ಹೃದಯಂ ವಿಷ್ಣುಃ, ವಿಷ್ಣುಶ್ಚ ಹೃದಯಂ ಶಿವಃ" ಶಿವನ ಹೃದಯ ವಿಷ್ಣು; ವಿಷ್ಣುವಿನ ಹೃದಯ ಶಿವ. ಎಂಬ ಮಾತು ಹರಿಹರರ ಅಭೇದಕ್ಕೆ ಹಿಡಿದ ಕನ್ನಡಿ. ಗುಹಾಸುರನ ಸಂಹಾರಕ್ಕಾಗಿ ಹರಿಹರರು ಒಂದೇ ದೇಹದಲ್ಲಿ ಪ್ರಾದುರ್ಭವಿಸಿದ ಪರ್ವದಿನವೇ 'ಮಹಾಶಿವರಾತ್ರಿ' ಎಂದು ಕೆಲವು ಗ್ರಂಥಗಳು ಸಾರಿವೆ. 'ಹರಿಹರ' (ಚಿತ್ರದುರ್ಗದಲ್ಲಿ) ಎಂಬ ಊರಿನಲ್ಲಿ ಹರಿಹರೇಶ್ವರನ ದೇವಾಲಯವು ಇರುವುದೂ ಇದಕ್ಕೆ ಸಾಕ್ಷಿಯಾಗಿದೆ.

ಜಾತಿಮತ ಪಂಥಗಳ ಭೇದವಿಲ್ಲದೆ ಎಲ್ಲರೂ ಈ ಮಹಾಶಿವರಾತ್ರಿ ವ್ರತವನ್ನು ಆಚರಿಸುತ್ತಾರೆ. ಅಂದು ಶೈವರು ಉಪವಾಸ ಮಾಡಿದರೆ ವೈಷ್ಣವರು ಶಿವನಿಗೆ ಮಹಾ ನೈವೇದ್ಯ ಅಂದರೆ ಅನ್ನವನ್ನು ಸಮರ್ಪಿಸಿ ಅದನ್ನು ಪ್ರಸಾದರೂಪವಾಗಿ ಸ್ವೀಕರಿಸುತ್ತಾರೆ.

ಸದ್ಯೋಜಾತ, ವಾಮದೇವ, ಅಘೋರ, ಈಶಾನ, ತತ್ಪುರುಷ ಎಂಬ ಪಂಚಮುಖಗಳಿಂದ ಕೂಡಿದ ಮಹಾಶಿವರಾತ್ರಿಯು ಪಂಚಮುಖವೇ ಆಗಿದೆ. ಅವೆಂದರೆ (೧) ನಿತ್ಯಶಿವರಾತ್ರಿ, (೨) ಪಕ್ಷಶಿವರಾತ್ರಿ, (೩) ಮಾಸಶಿವರಾತ್ರಿ, (೪) ಯೋಗಶಿವರಾತ್ರಿ ಮತ್ತು ಐದನೆಯದೇ ಮಹಾಶಿವರಾತ್ರಿ. ಪ್ರತಿ ಮಾಸದ ಕೃಷ್ಣಪಕ್ಷದ ಚತುರ್ದಶಿಯಂದು ಮಾಸಶಿವರಾತ್ರಿ. ಪಂಚಾಂಗಗಳಲ್ಲಿ ಇದರ ಉಲ್ಲೇಖವನ್ನು ಕಾಣಬಹುದು. ಮಾಘಮಾಸದ ಕೃಷ್ಣಪಕ್ಷದ ಚತುರ್ದಶಿಗೆ ವಿಶೇಷ ಪ್ರಾಶಸ್ತ್ಯವಿದೆ. ಅದೇ ಮಹಾಶಿವರಾತ್ರಿ. ಮಹತ್ತಿನಿಂದ ಕೂಡಿದ ಶಿವರಾತ್ರಿ ಇದಾದುದರಿಂದಲೇ ಇದು ಮಹಾಶಿವರಾತ್ರಿ. ಈಶಾನ್ಯ ಸಂಹಿತೆಯ ನಾರದಖಂಡದಲ್ಲಿ ಹೀಗೆ ಹೇಳಿದೆ.

ಮಾಘ ಕೃಷ್ಣ ಚತುರ್ದಶ್ಯಾ
ಯದಿ ದೇವೋ ಮಹಾನಿಶಿ
ಶಿವಲಿಂಗ ತಯೋದ್ಭೂತಃ
ಕೋಟಿಸೂರ್ಯ ಸಮಪ್ರಭಃ

ಮಾಘ ಕೃಷ್ಣಚತುರ್ದಶಿಯ ಮಹಾರಾತ್ರಿಯಲ್ಲಿ ಕೋಟಿಸೂರ್ಯ ಸಮಪ್ರಭನಾದ ಶಿವನು ಲಿಂಗಾಕಾರದಲ್ಲಿ ಪ್ರಾದುರ್ಭವಿಸಿದ. 'ಶಿ' ಎಂದರೆ ಮಂಗಳವನ್ನು 'ವ' ಎಂದರೆ ಕೊಡುವವನು. ಯಾರು ನಮಗೆ ಸಮಸ್ತ ಸನ್ಮಂಗಳವನ್ನು ಅನುಗ್ರಹಿಸುವನೋ ಅವನೇ ಶಂಕರ. ಶಿವ ಎಂಬ ಎರಡಕ್ಷರವನ್ನು ಸದಾ ಜಪಿಸುತ್ತಿದ್ದರೆ ಅವನು ಸರ್ವಪಾಪಗಳಿಂದಲೂ ಮುಕ್ತನಾಗುತ್ತಾನೆ. ಅದನ್ನೇ ಸರ್ವಜ್ಞನು,

ಅಕ್ಕರವು ಲೇಖಕ್ಕೆ ತರ್ಕತಾವಾದಕ್ಕೆ
ಮಿಕ್ಕ ಓದುಗಳು ತಿರಪೆಗೆ ಮೋಕ್ಷಕ್ಕೆರ
ಡಕ್ಕರವೆ ಸಾಕು ಸರ್ವಜ್ಞ

ಎಂದಿದ್ದಾನೆ. "ಅಭಿಷೇಕ ಪ್ರಿಯೋ ರುದ್ರಃ" ಎಂಬ ವಚನಾನುಸಾರ ಶಿವನು ಅಭಿಷೇಕ ಪ್ರಿಯ. ಆದಕಾರಣವೇ ಶಿವರಾತ್ರಿಯ ದಿನ ರಾತ್ರಿಯ ನಾಲ್ಕು ಜಾವವೂ ಶಿವನಿಗೆ ಮಹಾನ್ಯಾಸಪೂರ್ವಕ ಏಕಾದಶವಾರ ರುದ್ರಾಭಿಷೇಕ ಮಾಡುತ್ತಾರೆ. ರುದ್ರನಿಗೆ ಅತ್ಯಂತ ಪ್ರಿಯವಾದ ರುದ್ರನಮಕ ಮತ್ತು ಚಮಕಗಳನ್ನು ಅಂದು ವೇದಜ್ಞರು ಪಠಿಸುತ್ತಾರೆ. ಏಕಾದಶವಾರ ರುದ್ರಾಭಿಷೇಕವೆಂದರೆ ೧೧ ಜನ ಮಂತ್ರವಿದರು ೧೧ ಬಾರಿ ರುದ್ರನಮಕವನ್ನು ಪಠಿಸಬೇಕು. ಅಷ್ಟು ಹೊತ್ತೂ ಧಾರಾಪಾತ್ರೆಯಿಂದ ಶಿವಲಿಂಗದ ಮೇಲೆ ಜಲಾಭಿಷೇಕವಾಗುತ್ತಿರುತ್ತದೆ. ಅನಂತರ ಶಿವಸಹಸ್ರನಾಮ ಮತ್ತು ಕ್ರಮಾರ್ಚನೆಗಳನ್ನು ಮಾಡುತ್ತಾರೆ. ಇಂತಹ ಒಂದು ಯಾಮದ ಪೂಜೆಗೆ ಸುಮಾರು ಆರುಗಂಟೆಗಳು ಬೇಕಾಗುತ್ತವೆ. ಹೀಗೆ ಜಾಗರಣೆ ಮಾಡಿದ ನಂತರ ಮಾರನೆ ದಿನ ಸೂರ್ಯೋದಯಕ್ಕೆ ಸರಿಯಾಗಿ ಮತ್ತೆ ಸ್ನಾನ ಮಾಡಿ ಶಿವನಿಗೆ ಏಕವಾರ ರುದ್ರಾಭಿಷೇಕ ಮಾಡಿ ಪ್ರಸಾದ ಸ್ವೀಕರಿಸಿ ಪಾರಣೆ ಮುಗಿಸಬೇಕು. ಪಾರಣೆಯ ನಂತರ ನಿದ್ರೆ ಬರುವುದು ಸಹಜ. ನಿದ್ರೆಯನ್ನು ಅಂದು ಸೂರ್ಯಾಸ್ತಮಾನದವರೆಗೂ ಮಾಡಬಾರದು. ಹೀಗೆ ಮಾಡುವುದರಿಂದ ಒಂದು ಲಕ್ಷ ಅಶ್ವಮೇಧಯಾಗ ಮಾಡಿದ ಫಲಪ್ರಾಪ್ತಿಯಾಗುತ್ತದೆ. ಕಲಿಯುಗದಲ್ಲಿ ಅಶ್ವಮೇಧಯಾಗವನ್ನು ನಿಷೇಧಿಸಿರುವುದರಿಂದ ಅದರ ಫಲವನ್ನು ರುದ್ರಾಭಿಷೇಕದಿಂದ ಪ್ರಾಪ್ತಿಮಾಡಿಕೊಳ್ಳಬಹುದು. ಒಂದು ವೇಳೆ ಪ್ರತಿಫಲಾಪೇಕ್ಷೆ ಇಲ್ಲದೆ ಇದನ್ನು ಮಾಡಿದರೆ ಪುನರಾವರ್ತಿ ರಹಿತವಾದ ಶಾಶ್ವತ ಬ್ರಹ್ಮಪದವಿಯು ಲಭ್ಯವಾಗುತ್ತದೆ.

ಅಭಿಷೇಕವೊಂದೇ ಅಲ್ಲದೆ ಅಂದು ಶಿವಕಥೆಯು ಎಲ್ಲೆಲ್ಲಿಯೂ ನಡೆಯುತ್ತದೆ. ಪ್ರಪಂಚದಾದ್ಯಂತ ಅಂದು ಶಿವಾಲಯಗಳಲ್ಲಿ ಶಿವಕಥೆ ಹಾಗೂ ಅಭಿಷೇಕ ನಡೆದು ಎಲ್ಲರೂ ಶಿವದರ್ಶನದಲ್ಲಿ, ಶಿವಕಥಾಶ್ರವಣದಲ್ಲಿ ಉತ್ಸುಕರಾಗಿರುತ್ತಾರೆ. ಅಂದು ಹೀಗೆ ವ್ರತಮಾಡಿದವನು ಶಿವಸಾಯುಜ್ಯವನ್ನು ಹೊಂದುತ್ತಾನೆಂದು ಶಿವನು ಮೃತ್ಯುವಿಗೆ ಹೇಳಿರುವ ಈ ವಿಷಯವು ಪದ್ಮಪುರಾಣದಲ್ಲಿದೆ.

ಶಿವರಾತ್ರಿಯಂದು ಶಿವಾಲಯದಲ್ಲಿ ವಾದ್ಯನುಡಿಸುವವನು ವೇದಘೋಷದ ಫಲವನ್ನು ಪಡೆಯುತ್ತಾನೆ. ಅಂದು ಶಿವದೇವಾಲಯದಲ್ಲಿ ಶಿವ

ಕಥೆ ಮಾಡಿದವನು ಶಿವಸಾಯುಜ್ಯವನ್ನು ಪಡೆಯುತ್ತಾನೆ.ಶಿವರಾತ್ರಿಯು ಸೋಮವಾರ ಬಂದರೆ ಶ್ರೇಷ್ಠವೆಂಬುದು ಹಲವರ ಮತವಾದರೆ ಭಾನುವಾರ ಅಥವಾ ಮಂಗಳವಾರವೆಂಬುದು ಮತ್ತೆ ಕೆಲವರ ಮತ. ಅಂದು ಶಿವಯೋಗವಿದ್ದರೆ ಹೆಚ್ಚಿನ ಪ್ರಾಶಸ್ತ್ಯವೆಂದು ಕೆಲವರು ಹೇಳುತ್ತಾರೆ.

ಶಿವರಾತ್ರೀ ವ್ರತವು 'ದ್ವಾದಶಾಬ್ದಿಕಾ' ಅಂದರೆ ಹನ್ನೆರಡು ವರುಷ ಆಚರಿಸುವ ವ್ರತವೆಂದು ಕೆಲವರೂ, 'ಚತುರ್ದಶಾಬ್ದಿಕಾ' ಅಂದರೆ ಹದಿನಾಲ್ಕು ವರ್ಷ ಆಚರಿಸತಕ್ಕದ್ದೆಂದು ಮತ್ತೆ ಕೆಲವರೂ ಹೇಳುತ್ತಾರೆ. ಆದರೆ ಶಿವರಾತ್ರಿ ಜೀವನ ಪರ್ಯಂತ ಆಚರಿಸುವ ಮಹಾವ್ರತಗಳಲ್ಲಿ ಒಂದೆಂಬುದರಲ್ಲಿ ಯಾವ ಸಂಶಯವೂ ಇಲ್ಲ.

ಮಹಾಶಿವರಾತ್ರಿಗೆ ಸಂಬಂಧಿಸಿದ ವಿಚಾರಗಳನ್ನು ನಾವು ಪುರಾಣ ಹಾಗೂ ಇತಿಹಾಸಗಳಲ್ಲಿ ಕಾಣುತ್ತೇವೆ. ಅರ್ಜುನನು ಇಂದ್ರಕೀಲ ಪರ್ವತದಲ್ಲಿ ಪರಮೇಶ್ವರನನ್ನು ಕುರಿತು ಪಾಶುಪತಾಸ್ತ್ರಕ್ಕಾಗಿ ಘೋರ ತಪಸ್ಸು ಮಾಡಿದ್ದು, ಶಿವನು ಕಿರಾತವೇಶದಿಂದ ಅವನಿಗೆ ದರ್ಶನವಿತ್ತು 'ಕದನಮುಖದಲಿ ಖೋಡಿಯಿಲ್ಲದೆ ದೆದರದೊದಗಿದ ನರಗೆ ಕಾರುಣ್ಯದಲಿ ಕಾಮವಿರೋಧಿ ಪಾಶುಪತಶರ'ವನ್ನು ದಯಪಾಲಿಸಿದ್ದು ಶಿವರಾತ್ರಿಯಂದೇ.

ಆರ್ಯಸಮಾಜದ ಸಂಸ್ಥಾಪಕರಾದ ಶ್ರೀ ದಯಾನಂದ ಸರಸ್ವತೀ ಸ್ವಾಮಿಗಳಿಗೆ ಅಧ್ಯಾತ್ಮಪಥ ತೋರಿದ್ದು ಮಹಾಶಿವರಾತ್ರಿಯಂದೇ.

ಬೇಟೆಗಾರನೊಬ್ಬ ಬೇಟೆಯ ನೆವದಿಂದ ಪ್ರಾಣಿಗಳಿಗಾಗಿ ಕಾಯುತ್ತಾ ಮರದ ಮೇಲೆ ಕುಳಿತಿದ್ದ. ಅಂದು ಶಿವರಾತ್ರಿಯೆಂಬುದು ಅವನಿಗೆ ತಿಳಿಯದು. ಇಡೀ ರಾತ್ರಿಯೆಲ್ಲಾ ಪ್ರಾಣಿ ಬೇಟೆಗೋಸ್ಕರ ಜಾಗರಣೆ ಮಾಡಿದ ಅವನು ಬೇಸರವಾಗಿ ಆ ಮರದಲ್ಲಿದ್ದ ಎಲೆಗಳನ್ನು ಕಿತ್ತು ಕೆಳಗೆ ಹಾಕುತ್ತಿದ್ದ. ಮರದ ಕೆಳಗೆ ಶಿವಲಿಂಗ ವೊಂದಿತ್ತು. ಇಡೀ ರಾತ್ರಿ ಆ ಎಲೆಗಳು ಶಿವಲಿಂಗದ ಮೇಲೆ ಬಿದ್ದು ಅದು ಶಿವಾರ್ಚನೆಯಾಯಿತು. ಇದರಿಂದ ಶಿವನು ಪ್ರೀತನಾಗಿ ಅವನಿಗೆ ಶಿವಸಾಯುಜ್ಯವನ್ನು ಕರುಣಿಸಿದನೆಂದು ಶಿವರಾತ್ರಿ ಮಹಾತ್ಮೆಯಲ್ಲಿ ವರ್ಣಿತವಾಗಿದೆ.

ಹೀಗೆ ತಿಳಿಯದೆಯೇ ಮಾಡಿದ ಆತನ ಪೂಜೆಯಿಂದ ಶಿವನು ಸಂತುಷ್ಟನಾದರೆ ತಿಳಿದು ಮಾಡುವ ಪೂಜೆಯಿಂದ ದೊರೆಯುವ ಸದ್ಗತಿಯನ್ನು ಊಹೆ ಮಾಡಲೂ ಸಾಧ್ಯವಿಲ್ಲ. ಆದಕಾರಣ ಶಿವರಾತ್ರಿಯಂದು ಸರ್ವಪ್ರಯತ್ನೇನ ಉಪವಾಸ ವ್ರತವನ್ನು ಮಾಡಿ ಶಿವಾರ್ಚನೆ ಮಾಡುವುದು ಶ್ರೇಯಸ್ಕರ.

ಓಂ ಶ್ರೀ ಸಾಂಬಸದಾಶಿವಾರ್ಪಣಮಸ್ತು

**ಯೋಗಾಚಾರ್ಯ ಕೆ. ಕೇಶವಮೂರ್ತಿ.**

# "ಶಿವ ಶಿವ ಎನ್ನುವ ಮಹಾಶಿವರಾತ್ರಿ"

---ಸಾಲೀಮಠ ದೊಡ್ಡಯ್ಯಶಾಸ್ತ್ರಿ




ಭಾರತವು ಜಗತ್ತಿನಲೆಲ್ಲಾ ಒಂದು ಅಧ್ಯಾತ್ಮ ಕೇಂದ್ರಸ್ಥಾನ ಇಲ್ಲಿ ನಿರಂತರವಾಗಿ ಸ್ಫುರಿಸಿದ ಜ್ಞಾನ ಭಕ್ತಿ ವೈರಾಗ್ಯ ಕರ್ಮಾದಿಗಳು ಜಗತ್ತಿನ ಮಾರ್ಗದ ರ್ಶನವಾಗಿದೆ ಎಂದರೂ ತಪ್ಪಾಗಲಾರದು. ಅದ ಕ್ಕೆಂದೇ ಇತರ ಧರ್ಮಗಳೂ ಭಾರತದಲ್ಲಿಯೇ ಊರ್ಜಿತಗೊಂಡವು ಎಂದು ಚರಿತ್ರಾಕಾರರ ಅನಿ ಸಿಕೆಯಾಗಿರುತ್ತದೆ.

ಇದಕ್ಕೆಲ್ಲಾ ಕಾರಣವೇನಿರಬಹುದು ಎಂದು ವಿವೇಚಿಸಿದಾಗ ಕೃತ, ತ್ರೇತಾ, ದ್ವಾಪರಾದಿ, ಕಲಿಯು ಗದವರೆಗೂ ನಡೆದು ಬಂದಿರುವ ಹಬ್ಬ ಹರಿದಿನ ಗಳೇ ಕಾರಣ, ಗೀತೆಯಲ್ಲಿ ಭಗವಂತ ಹೇಳಿದಂತೆ ಏಷ ಧರ್ಮಃ ಸನಾತನಃ ಇವುಗಳಿಗೆ ಆದಿ ಎಂದು ಎಂದು ಹೇಳುವುದೇ ಕಷ್ಟ. ಜೀವ, ಜಗತ್ತು ಪರ ಮಾತ್ಮ ನಿರಂತರ ಇರುವ ಹಾಗೆಯೇ ಈ ಹಬ್ಬತ ತ್ವವು ಅವುಗಳ ಸಂಗಮವೇ ಆಗಿದೆ.

ಹಬ್ಬಗಳು ಮೂಲ ಸಂದೇಶ :-- ಹುಟ್ಟು ಸಾವು ಹಾಗೂ ಇರವಿನ ಮಧ್ಯದಲ್ಲಿ ಪ್ರತಿಯೊಂದು ಜೀವಿಯು ಬಯಸುವುದು ಈ ಭವದ ಬಂಧನ ದಿಂದ ಬಿಡುಗಡೆಯನ್ನು. ಇದು ನಿತ್ಯವಾದದ್ದು ಅದ ಕ್ಕಾಗಿಯೇ ಜ್ಞಾನ, ಭಕ್ತಿ, ವೈರಾಗ್ಯದ ತ್ರಿಪಥ. ಪ್ರತಿ ಯೊಬ್ಬರ ಜ್ಞಾನಸಾಕ್ಷಿಯನ್ನು ತೆರೆದು ಪರತತ್ವವನ್ನು ಅರಿಯುವುದೇ ಆಗಿದೆ.

ಶಿವತತ್ವ ಸಂಕೇತ :-- ಇದನ್ನೇ ಸಾಕ್ಷಿಭೂತವಾಗಿ ತೋರುತ್ತಿರುವಂತೆ ಪರಶಿವ, ಜೀವರಿಗೂ ಸಾಕ್ಷಾ ತ್ಕಾರದ ಮಾರ್ಗವನ್ನು ತೋರಿಸುವುದೇ ಮೂರನೇ ನೇತ್ರದಿಂದ ಕಾಮನನ್ನು ದಹಿಸಿ ರಾಮನನ್ನು ಸಾಕ್ಷಾ ತ್ಕರಿಸಿಕೊಂಡ ಶಿವ ಮನೋನಿಯಾಮಕನೆಂದು ಕೊಂಡಿದ್ದಾರೆ.

ಮೂರು ಶೂಲಗಳನ್ನು ತೆರೆಯುವ ತ್ರಿಶೂಲ ಧರಿಸಿ, ಮನಶ್ಶಾಂತಿಗೆ ಶಶಿಯನ್ನು ಧರಿಸಿ ಢಮರು ಗದ ಕೃತಿಯಲ್ಲಿ ಮಗ್ನನಾಗಿ ಗಂಗಾಮೃತ ನಿರಂತರ ವಾಗಿ ಶಿರದಲ್ಲಿ (ಸಹಸ್ರಾರದಲ್ಲಿ) ಧರಿಸಿ, ನೃತ್ಯದಲ್ಲಿ ತಲ್ಲೀನನಾದ ರುದ್ರನ ಭಂಗಿ ನಿರಂತರ ನಯನಕ್ಕೆ ಗೋಚರವಾದಾಗ ಒಳಗಣ್ಣು ತೆರೆದೀತು, ಭವಹರಿ ದೀತು, ಶಾಂತಿ ದೊರಕೀತು.

ಅದಕ್ಕೆಂದೇ ದಾಸರು ಕೈಲಾಸವಾಸ ಗೌರೀಶ-- ಈಶ, ತೈಲಧಾರೆಯ ತೆರದಿ ಮನಸ್ಸು ಕೊಡು ಹರಿ ಯಲ್ಲಿ --ಎಂದು ಭಕ್ತಿ ಉದ್ರೇಕದಿಂದ ಸ್ತುತಿಸಿದ್ದಾರೆ. ಶಿವನಿಗೆ ಲಯಕರ್ತನೆಂದೂ ಕರೆಯುವುದುಂಟು. ಕಾರಣ -- ಯೋಗವ್ಯಾಖ್ಯೆಯಲ್ಲಿ ಚಿತ್ತವೃತ್ತಿನಿ ರೋಧ ಎನ್ನುವುದರಿಂದ್ಧ ಮನದ ವಾಸನೆಗಳನ್ನೆಲ್ಲಾ ಲಯಗೊಳಿಸಿ ಬುದ್ಧಯೋಗಕ್ಕೆ ಅನುವು ಮಾಡಿಕೊ ಡುವುದರಿಂದಲೇ ಭೂತಗಣಾಧಿಪ ಎಂದು ಕರೆ ಯುವದುಂಟು.

ಇಂಥ ಹರಿದಾಡುವ ಮನಸ್ಸು ನಿಲ್ಲಿಸಿ ಪ್ರತಿ ಜೀವರು ಪರತತ್ವ ಅರಿಯುವ ಪ್ರಗತಿಪಥದಲ್ಲಿ ಕಾಣುವ ದಿನಗಳೇ ಈ ಹಬ್ಬಗಳು ಅಂಥದಹಲ್ಲೂ ಶಿವರಾತ್ರಿ ಒಂದು ವಿಶಿಷ್ಟವಾದ ಜ್ಞಾನೋದಯದ ದಿನ.

ಅರಿತವರಿಗೆ ಅನುದಿನವೂ ಶಿವರಾತ್ರಿ ಮರೆತವ ರಿಗೆ ಅಪರಾತ್ರಿ. ವರ್ಷದ ಮಾಘದ ಪಾಲ್ಗುಣ ದಿನ ಶಿವರಾತ್ರಿ ಎಂದೇ ಪ್ರಸಿದ್ಧವಾದ (ಪವಿತ್ರವಾದ) ದಿವಸ.

ಆ ದಿನವೇ ಶಿವನು ತಾಂಡವನೃತ್ಯಗೈದನೆಂದೂ ಹಾಲಾಹಲ ಸೇವಿಸಿ ಜಗತ್ತನ್ನು ರಕ್ಷಿಸಿದನೆಂದೂ ಶಿವನ ಜನ್ಮದಿನವೆಂದೂ ಹೇಳುವ ಸಂಗತಿಗಳಿವೆ. ಶಿವನನ್ನು ಅನೇಕ ಆಗಮ, ಪುರಾಣ, ಕಾವ್ಯಗಳಲ್ಲೂ ಸ್ತುತಿಸಲಾಗಿದೆ. ಶಿವಶರಣರೂ ಹರಿದಾಸರೂ, ಇಂದಿಗೂ ಕೊಂಡಾಡುತ್ತಿದ್ದಾರೆ.

ಶಿವನ ದ್ವಾದಶ ಲಿಂಗಕ್ಷೇತ್ರಗಳು ಜಗತ್ತಿನ ಎಲ್ಲ ಕಡೆ ಪ್ರಸಿದ್ಧವಾಗಿವೆ. ಅವುಗಳ ದರ್ಶನವೇ ಮುಕ್ತಿ ಎಂದೂ ಸಾರಿವೆ. ಶ್ರೀಶೈಲ, ಉಜ್ಜೈನಿ, ಕೇದಾರ, ಕಾಶಿ, ರಾಮೇಶ್ವರ, ಹಂಪಿ ಆದಿಕ್ಷೇತ್ರಗಳಲ್ಲಿ ಈ ದಿನ ದಂದು ವಿಶೇಷ ಪೂಜೆ ಸಲ್ಲಿಸಿ ಭಕ್ತಾದಿಗಳು ಉಪ ವಾಸದಿಂದ ಶಿವಕೀರ್ತನ ನರ್ತನಾದಿಗಳಲ್ಲಿ ಮಗ್ನ ರಾಗಿ ಜಾಗರಣೆ ಗೈವುದನ್ನು ಕಾಣುತ್ತೇವೆ.

ಶಿವರಾತ್ರಿಯಂದು ಶುಚಿರ್ಭೂತರಾಗಿ ಸ್ನಾನ ಮಾಡಿ ಪುಷ್ಪ ಪತ್ರೆ ಫಲತಾಂಬೂಲಾದಿಗಳಿಂದ ಕೂಡಿಕೊಂಡು ಶಿವನನ್ನು ಅರ್ಚಿಸಿ ರಾತ್ರಿ ಜಾಗರಣೆ ಯಲ್ಲಿ ಕಳೆದು ಮರುದಿನ ಪ್ರಸಾದ ಸೇವಿಸುವ ಭಾಗ್ಯ ಜಾತಿಮತಗಳ ಮೀರಿ ಸರ್ವ ಮನ ಸಂಕಲ್ಪ ವಾಗಲಿ ಎಂದು ಆಶಿಸುವೆನು.



# ನಿಜಗುಣ ಶಿವಯೋಗಿ

---ಶಾಂತಾಬಾಯಿ ಎಸ್. ನೂಲಿಕರ.

ನಿಜವಾದ ಮಾನವಧರ್ಮ ಯಾವುದು ಎನ್ನುವ ಅರ್ಥವನ್ನು ಸೂಚಿಸುವುದಕ್ಕೆ ಉಪನಿಷತ್ತಿನಲ್ಲಿ ಒಂದು ಕಥೆ ಬರುತ್ತದೆ.

ಸೃಷ್ಟಿಕರ್ತನಾದ ಬ್ರಹ್ಮದೇವ ಬ್ರಹ್ಮಾಂಡವನ್ನೆಲ್ಲ ನಿರ್ಮಿಸಿದ. ಸಕಲ ಚರಾಚರ ವಸ್ತುಗಳ ಸೃಷ್ಟಿಯಾಯಿತು. ಆದರೆ ಏನೊ ಕೊರತೆಯಾದಂತಾಗಿ ಅವನಿಗೆ ನೆಮ್ಮದಿ ಇಲ್ಲದಂತಾಯಿತು. ಸ್ಥಿತಿಕರ್ತನಾದ (ಬ್ರಹ್ಮ) ವಿಷ್ಣುವಿನ ಬಳಿಗೆ ಬಂದು ವಿಚಾರಮಾಡಿದ. ಸಮಾಧಾನವಾಗಲಿಲ್ಲ. ಇಬ್ಬರೂ ಲಯಕರ್ತನಾದ ಶಿವನೆಡೆಗೆ ಬಂದರು. ಮೂವರು ಬಹಳ ಕಾಲ ಆಲೋಚಿಸಿದರು. ಮನಸ್ಸಿಗೆ ಏನೋ ಹೊಳೆಯಿತು. ಮಾನವನ ಸೃಷ್ಟಿಯಾಯಿತು. ಮಾನವ ಸೃಷ್ಟಿಯಿಂದ ಆ ಮೂವರಿಗೂ ಸಮಾಧಾನವಾಯಿತು. ಸಂತೋಷಪಟ್ಟರು.

ದೇವತೆಗಳು ಮಾನವ ಸೃಷ್ಟಿಯಿಂದ ಏಕೆ ಸಂತೋಷ ಪಟ್ಟರೆಂಬುದನ್ನು ಕೆಲವರು ದೀರ್ಘವಾಗಿ ಚಿಂತಿಸಿದರು. ಮಾನವ ಸೃಷ್ಟಿಯು ಏನೆಂಬುದನ್ನು ಕಂಡುಹಿಡಿದರು. ಆತ್ಮಾನಂದದಲ್ಲಿ ಮುಳುಗಿದರು. ಈ ಪ್ರಕಾರವಾಗಿ ತಾವು ಕಂಡ ಆನಂದವನ್ನು ಬರೆದರು. ಅವೇ ಉಪನಿಷತ್ತುಗಳು. ಈ ಪ್ರಕಾರವಾಗಿ ಮಾನವ ಶಕ್ತಿಯನ್ನು ತಿಳಿದುಕೊಂಡು ಉದ್ಧಾರವಾದರು. ಮಾನವ ಜನ್ಮವೆಂಬ ಮಹಾಸಂಪತ್ತಿನ ಸದುಪಯೋಗ ಮಾಡಿಕೊಂಡರು. ಇಂಥವರಲ್ಲಿ ನಿಜಗುಣರು ಪ್ರಸಿದ್ಧರೂ, ಶ್ರೇಷ್ಠರೂ ಆಗಿದ್ದಾರೆ. ಹೆಸರಿಗೆ ತಕ್ಕಂತೆ ಇರುವ ನಿಜಗುಣರು 'ನರಜನ್ಮದಿಂಪೇಪದೊಂದು ಮಿಗಿಲುಂಟೆ'? ಎಂಬ ಪ್ರಶ್ನೆಯನ್ನು ಮುಂದಿಟ್ಟುಕೊಂಡರು. ಪ್ರಾಪಂಚಿಕ ಎಲ್ಲ ಸುಖ ಅವರಿಗಿದ್ದರೂ 'ಸುಮ್ಮನೆ ಕಾಲವನ್ನೇ ಕಳೆದು ಸಾವುದುಚಿತವೇ ? ನಮ್ಮಾ ನಿಜವನು ಮುಕ್ತಿಪಡೆಯದೇ ಮನುಜ ನೀ' ಎಂದು ಚಿಂತಿಸಿದ್ದಾರೆ, ಮುಕ್ತಿ ಪಡೆದಿದ್ದಾರೆ. ತಮ್ಮಂತೆ ಅನ್ಯರೂ ಮುಕ್ತಿ ಪಡೆಯಲೆಂದು ದಾರಿ ತೋರಿಸಿದ್ದಾರೆ. ಅವರ ಈ ಉಜ್ವಲ ಜ್ಞಾನದೀಪ ಅವರ ಕೃತಿಯಲ್ಲಿ ಸ್ಥಿರವಾಗಿ, ನಿರಂತರವಾಗಿ ನಮ್ಮನ್ನು ಮುಕ್ತರನ್ನಾಗಿ ಮಾಡಿ ಪರಮಾನಂದವನ್ನು ಕೊಡುವಂಥದ್ದಾಗಿದೆ. ಅವರ ಅಪಾರ ಕಾವ್ಯರಾಶಿ 'ಅನುಭವಸಾರ' ಕನ್ನಡದ ಜ್ಞಾನಭಂಡಾರವಾಗಿ ಪ್ರಸಿದ್ಧವಾಗಿದೆ. ಕಾವ್ಯಗಳನ್ನು ಕವಿಗಳು ಮಾತ್ರ ರಚಿಸುತ್ತಾರೆ. ತತ್ವವನ್ನು ಧರ್ಮಗುರುಗಳು ಬೋಧಿಸುತ್ತಾರೆ. ಇಂಥವರು ಲೋಕದಲ್ಲಿ ಸಿಗುತ್ತಾರೆ. ನಿಜಗುಣರು ಈ ಎರಡು ಕೆಲಸಗಳನ್ನು ಏಕಕಾಲದಲ್ಲಿ ಮಾಡಿದರು. ಕಾವ್ಯಾನಂದದಿಂದ ಮುಂದುವರೆದು ಆತ್ಮಾನಂದದೆಡೆಗೆ ಹೋದವರು ಅಪರೂಪ. ನಿಜಗುಣರು ತಮ್ಮ ಪ್ರತಿಷ್ಠೆಗಾಗಿಯೋ, ರಾಜಾಶ್ರಯಕ್ಕಾಗಿಯೋ ಕಾವ್ಯವನ್ನು ರಚಿಸಿದವರಲ್ಲ. ಸ್ವತಃ ರಾಜರಾಗಿದ್ದರೂ ರಾಜತ್ವವನ್ನು ತೊರೆದು ಶಿವಯೋಗಿಗಳಾಗಿದ್ದರು. ನಿಜಗುಣ ಶಿವಯೋಗಿಗಳ ಜೀವನಚಿತ್ರ ಇನ್ನೂ ಅಸ್ಪಷ್ಟವಾಗಿಯೇ ಇದೆ. ಅವರು ರಾಜವೈಭವದಲ್ಲಿ, ಸಂಸಾರಿಕ ಕ್ಷೇತ್ರದಲ್ಲಿ ಬಹಳ ದಿವಸ ಉಳಿಯಲಿಲ್ಲ. ಕವಿಯಾಗಿ, ಶಿವಯೋಗಿಯಾಗಿ, ಸಿದ್ಧ ಪುರುಷರಾಗಿ, ತತ್ವಜ್ಞಾನಿಗಳಾಗಿ, ಪಂಡಿತೋತ್ತಮರಾಗಿ, ಸಮಗ್ರ ಜನತೆಯನ್ನು ಎಚ್ಚರಿಸಿದ್ದಾರೆ. ಜನತೆ ಅವರನ್ನು ನಿಜಗುಣ ಶಿವಯೋಗಿ ಎಂದು ಪ್ರೀತಿಯಿಂದ ಗುರುವಾಗಿ ಸ್ವೀಕರಿಸಿದ್ದಾರೆ.

ಪುರಾಣದ ಕಥೆಯಂತೆ ಶಿವಲೋಕದಲ್ಲಿದ್ದ ಸಕಲಗಣೇಶ್ವರರೆಂಬ ಗಂಧರ್ವ, ಮಹೇಶ್ವರನ ಆಜ್ಞೆಯಂತೆ ಭೂಲೋಕದಲ್ಲಿ ನಿಜಗುಣಿ ಎಂಬ ಹೆಸರಿನಿಂದ ರಾಜಮನೆತನದಲ್ಲಿ ಜನಿಸಿದರು. ಕರ್ನಾಟಕದ ಕೊಳ್ಳೇಗಾಲ ತಾಲೂಕದ (ಶಿವಮೊಗ್ಗಾ) ಬೆಳಕವಾಡಿಯಲ್ಲಿ ಅಧಿಕಾರದಿಂದ ರಾಜನಾಗಿದ್ದರೂ, ಶಿವಜ್ಞಾನಿಯಾಗಿ, ಪ್ರಜಾಪ್ರೇಮಿಯಾಗಿ ಬಾಳಿದರು. ಆಚಾರ್ಯದೇವೋಭವ, ಮಾತೃದೇವೋಭವ, ಪಿತೃದೇವೋಭವ, ಅತಿಥಿದೇವೋಭವ ಎನ್ನುವ ಭಾರತೀಯ ಸಂಸ್ಕೃತಿಯ ಮಂತ್ರಗಳಿಗೆ ಹೊಂದಿಕೊಂಡಿದ್ದರು. ಒಂದು ದಿನ ತಮ್ಮ ಅರಮನೆಯಲ್ಲಿ ಅತಿಥಿಸತ್ಕಾರ ಸರಿಯಾಗಲಿಲ್ಲವೆಂದು ತಿಳಿದು ಬಂದಾಗ ತಮಗಿತ್ತ ಮೃಷ್ಟಾನ್ನಭೋಜನ ವಿಷವಾಯಿತು. ತೀವ್ರತರವಾದ ಅವರ ವೈರಾಗ್ಯ ಅರಸು ಜೀವನವನ್ನು ತ್ಯಾಗಮಾಡಿತು. ವಿಷಸರ್ಪವಾಗಿರುವ ಸಂಸಾರವನ್ನು ಬಿಟ್ಟು ಶಿವಯೋಗದಲ್ಲಿ ಮನವಿಟ್ಟರು. ಶಂಭುಲಿಂಗ ಬೆಟ್ಟದಲ್ಲಿ ಯೋಗಸಾಧನೆ ಮಾಡಿದರು. ಅರಸೊತ್ತಿಗೆ ಬಿಟ್ಟು ಶಿವಯೋಗಿ ಪಟ್ಟವನ್ನೇರಿದರು. ಬೂದಿಕೇರಿ ಮಠದ ಭುಜಲಿಂಗ ಸ್ವಾಮಿಯ ಶಿಷ್ಯರಾದರು. ನಿಜಗುಣರಿಗೆ ಸಂಸಾರತ್ಯಾಗ ಅನಿರೀಕ್ಷಿತವಾಗಿ ಒದಗಿಬಂದಿತು. ಆ ಸಮಯವನ್ನು, ಅವಕಾಶವನ್ನು ಸದುಪಯೋಗ ಮಾಡಿಕೊಂಡರು. ಈ ಭಾಗ್ಯ ಎಲ್ಲರಿಗೂ ಸಿಗುವುದಿಲ್ಲ. ಭಗವದ್ಗೀತೆಯಲ್ಲಿ ಪುರುಷೋತ್ತಮಯೋಗದಲ್ಲಿ ಶ್ರೀಕೃಷ್ಣ ಪರಮಾತ್ಮ ಹೇಳಿದಂತೆ--

ನಿರ್ಮಾನ ಮೋಹಾ ಜಿತಸಂಗದೋಷಾ
ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ
ದ್ವಂದ್ವೈರ್ವಿಮುಕ್ತಾಃ ಸುಖದುಃಖ ಸಂಜ್ಞೈ
ರ್ಗಚ್ಛಂತ್ಯ ಮೂಢಾಃ ಪದಮವ್ಯಯಂ ತತ್

ಅಹಂಕಾರ ಮೋಹಗಳಿಲ್ಲದವರೂ, ಆಸಕ್ತಿ ಎಂಬ ದೋಷದಿಂದ ಪಾರಾದವರೂ ಅಧ್ಯಾತ್ಮ ನಿತ್ಯರೂ, ಸಮಸ್ತಕಾಮಗಳನ್ನೂ ಬಿಟ್ಟಿರುವವರೂ, ಸುಖದುಃಖಗಳೆಂಬ ದ್ವಂದ್ವಗಳಿಂದ ಬಿಡಲ್ಪಟ್ಟವರೂ ಆದ ಜ್ಞಾನಿಗಳು ಅವ್ಯಯವಾದ ಪದವನ್ನು ಪಡೆಯುತ್ತಾರೆ.

ನಿರಂಜನರಾದ ನಿಜಗುಣರು ತಮ್ಮ ಸಾಧನೆಯಿಂದ ಪೂರ್ಣಫಲವನ್ನು ಸಿದ್ಧಿಸಿಕೊಂಡರು. ಯೋಗಾಭ್ಯಾಸ, ಶಾಸ್ತ್ರಾಭ್ಯಾಸಗಳು ನಿರಂತರವಾಗಿ ನಡೆಸಿಕೊಂಡು ಭಾರತೀಯ ದರ್ಶನಶಾಸ್ತ್ರವನ್ನು ಮನನಮಾಡಿಕೊಂಡರು.

ನ ತದ್ಭಾಸಯತೇ ಸೂರ್ಯೋ
ನ ಶಶಾಂಕೋ ನ ಪಾವಕಃ
ಯದ್ಗತ್ವಾ ನ ನಿವರ್ತಂತೇ
ತದ್ಧಾಮ ಪರಮಂ ಮಮ ಗೀತಾ 15, 6

ಎಂದು ಭಗವಂತ ಹೇಳಿದ್ದನ್ನು ಗಟ್ಟಿಯಾಗಿ ಹಿಡಿದು ಅನುಭವದಲ್ಲಿ ದಿವ್ಯಾತ್ಮರಾದರು. ಪರಮಾರ್ಥ ಪ್ರಕಾಶಿಕೆ, ಪರಮಾನುಭವ ಬೋಧೆ, ಕೈವಲ್ಯ ಪದ್ಧತಿ, ಪರಮಾರ್ಥ ಗೀತೆ, ಅನುಭವ ಸಾರ, ವಿವೇಕ ಚಿಂತಾಮಣಿ ಎಂಬ ಷಡ್‌ಗ್ರಂಥಗಳನ್ನು ಬರೆದರು. ಯೋಗವಾಶಿಷ್ಠ ಗ್ರಂಥದ ಸಾರವೇ, ಭಾವವೇ ಪರಮಾರ್ಥ ಗೀತೆಯಾಗಿದೆ. 11 ಗೀತೆಗಳಲ್ಲಿ ಜಗದೀಶ, ಜೀವೇಶ, ಜಗತ್ತು ಇವುಗಳ ಸಂಬಂಧ ಸ್ವರೂಪವನ್ನು ಈ ಗ್ರಂಥದಲ್ಲಿ ನಿಜಗುಣರು ತಿಳಿಸಿದ್ದಾರೆ. ವಿವೇಕ ಚಿಂತಾಮಣಿಯಲ್ಲಿ 10 ಪ್ರಕರಣಗಳಿದ್ದು, ಧಾರ್ಮಿಕ ನೈತಿಕ ವಿಷಯಗಳೂ, ಜ್ಯೋತಿಷ್ಯ ಸಂಗೀತ, ಸಾಹಿತ್ಯ ಖಗೋಳ, ಭೂವಿವರಣೆಯನ್ನೆಲ್ಲಾ ಹೇಳಿದೆ. ಇವರು ರಚಿಸಿದ ಗ್ರಂಥಗಳಲ್ಲಿ ಇದು ಅತ್ಯಂತ ಮಹತ್ವದ ಮತ್ತು ಬೃಹತ್ತಾದ ಕೃತಿಯಾಗಿದೆ. ಅನುಭವ ಸಾರದಲ್ಲಿ 46 ಸೂತ್ರಗಳು 535 ತ್ರಿವಿಧಿಗಳು ಇವೆ. ಯಾಜ್ಞವಲ್ಕರು ತಮ್ಮ ಹೆಂಡತಿಯ ಪ್ರಶ್ನೆಗಳಿಗೆ ಉತ್ತರಿಸಿದ ಅಮೃತಧಾರೆಯೇ ಪರಮಾನುಭವ ಬೋಧೆಯಾಗಿದೆ.

ನಿಜಗುಣ ಶಿವಯೋಗಿಗಳು ಮಹಾವಿದ್ವಾಂಸರು ಮತ್ತು ಘನತರ ಗ್ರಂಥಕರ್ತರು ಎಂದು ಕನ್ನಡ ಸಾಹಿತ್ಯದ ಇತಿಹಾಸವನ್ನು ಸಂಶೋಧನ ಮಾಡಿದ ಇ.ಪಿ. ರೈಸರವರು ಹೇಳಿದ್ದಾರೆ. ಶ್ರೀ ಷಡಕ್ಷರಿ ಶಿವಯೋಗಿಗಳು ತಮ್ಮ ಚಂಪೂಕಾವ್ಯದಲ್ಲಿ (ರಾಜಶೇಖರ ವಿಳಾಸ) ನಿಜಗುಣರನ್ನು ಹೊಗಳಿದ್ದಾರೆ. ★

# ಮಧ್ವರಜೀವನ ಸಂಗ್ರಹ

---ಆದ್ಯರಾಮಾಚಾರ್ಯ.

ದಾರ್ಶನಿಕ ಮಹಾಪುರುಷರಿಗೆ ಜನ್ಮಕೊಟ್ಟ ನೆಲ ಭರತಖಂಡವೆಂದು ಕರೆಸಿಕೊಳ್ಳುತ್ತದೆ. ನಮ್ಮ ರಾಷ್ಟ್ರದ ದರ್ಶನಾಚಾರ್ಯರಲ್ಲಿ ಶ್ರೀ ಶಂಕರಾಚಾರ್ಯರು ಕೇರಳದಲ್ಲಿ ಜನಿಸಿದರು. ರಾಮಾನುಜಾಚಾರ್ಯರು ತಮಿಳುನಾಡಿನವರು. ಮೂರನೆಯವರಾದ ಆಚಾರ್ಯ ಮಧ್ವರು ಮಾತ್ರ ಅಪ್ಪಟ ಕನ್ನಡ ನಾಡಿನಲ್ಲಿ ಜನಿಸಿ ವಿಶ್ವಕ್ಕೆ ದ್ವೈತದರ್ಶನವನ್ನು ಬೋಧಿಸಿದ ಮಹಾಪುರುಷರೆನಿಸಿದ್ದಾರೆ. ದಾರ್ಶನಿಕರು ಎಂದರೆ ದರ್ಶನಶಾಸ್ತ್ರ ಪ್ರತಿಪಾದಕರು ಎಂದರ್ಥ. ಇದೇ ಮಾತನ್ನು ನ್ಯಾಯಕೋಶಕಾರರು ತತ್ತ್ವಜ್ಞಾನ ಸಾಧನಶಾಸ್ತ್ರ ಎಂಬುದಾಗಿ ವಿವರಿಸಿರುವುದುಂಟು.

ಉಡುಪಿ ನಮ್ಮ ನಾಡಿನ ಕರಾವಳಿ ಪ್ರದೇಶದಲ್ಲಿಯ ಪುಣ್ಯಕ್ಷೇತ್ರ. ಉಡುಪಿ ಎಂದರೆ ಚಂದ್ರ. ದಕ್ಷಿಣ ಕನ್ನಡದಲ್ಲಿ ನಾಗಮಂಡಲ ಪೂಜೆ, ನಾಗಾರಾಧನೆ ಇಂದಿಗೂ ವಿಶೇಷ ಮಹತ್ವವಿದೆ. ಇಲ್ಲಿ ಒಂದು ಕಾಲದಲ್ಲಿ ರಾಮಭೋಜನೆಂಬ ದೊರೆ ರಾಜ್ಯವನ್ನಾಳುತ್ತಿದ್ದನೆಂದು ಅಭ್ಯಾಸದಿಂದ ತಿಳಿದು ಬರುತ್ತದೆ.

ಮಧ್ವಾಚಾರ್ಯರು ಉಡುಪಿಯ ಸಮೀಪವರ್ತಿ ಸ್ಥಳವಾದ ಪಾಜಕ ಎಂಬ ಗ್ರಾಮದಲ್ಲಿ ಜನ್ಮತಾಳಿದರು. ಈ ಮಹಾನುಭಾವರ ಜೀವನಚರಿತ್ರೆಯನ್ನು ಅರಿತುಕೊಳ್ಳಲು ಸುಮಧ್ವ ವಿಜಯವೆಂಬ ಸಂಸ್ಕೃತ ಕಾವ್ಯ ಗ್ರಂಥವೇ ಮೂಲಾಧಾರ. ಈ ಗ್ರಂಥವನ್ನು ರಚಿಸಿದವರು ಕವಿಕುಲತಿಲಕರೆನಿಸಿದ ತ್ರಿವಿಕ್ರಮ ಪಂಡಿತಾಚಾರ್ಯರ ಮಕ್ಕಳಾದ ನಾರಾಯಣ ಪಂಡಿತಾಚಾರ್ಯರು. ಗ್ರಂಥಕಾರರು ಆಚಾರ್ಯರನ್ನು ಹನುಮ, ಭೀಮ, ಮಧ್ವ ಎಂದು ಅವತಾರತ್ರಯಗಳಲ್ಲಿ ವರ್ಣಿಸಿದುದು ವಿಶೇಷವೆನಿಸುವುದು.

ಶ್ರೀಮನ್ಮಧ್ವಾಚಾರ್ಯರು ಕ್ರಿ.ಶ. ೧೨೩೮ ರಲ್ಲಿ ಜನಿಸಿದರೆಂದೂ ಭಗವಂತ ಹಾಗೂ ಜೀವೇಶ್ವರ ಭೇದವಾದವೆಂದೆನಿಸಿದ ದ್ವೈತಮತವನ್ನು ಪ್ರಚಾರ ಮಾಡುತ್ತಾ ಕ್ರಿ.ಶ. ೧೩೧೭ ರಲ್ಲಿ ಅದೃಶ್ಯರಾದರೆಂದೂ ಕೆಲವು ವಿದ್ವಾಂಸರ ಅಭಿಪ್ರಾಯ.

ಆಚಾರ್ಯ ಮಧ್ವರು ತಮ್ಮ ಜೀವಿತಾವಧಿಯಲ್ಲಿ ಮೂವತ್ತೇಳು ಕೃತಿರತ್ನಗಳನ್ನು ನಾಡಿನ ಸಾಹಿತ್ಯಕ್ಕೆ ಒದಗಿಸಿದರು. ಈ ಮಾತನ್ನು [illegible]ಯರು ಕೃತಿರತ್ನಮಾಲಿಕಾ ಎಂಬ ಕೃತಿಯಲ್ಲಿ ವರ್ಣಿಸಿರುವುದುಂಟು. ಮಧ್ವಾಚಾರ್ಯರಿಗೆ ಪೂರ್ಣಪ್ರಜ್ಞರೆಂದೂ, ಆನಂದತೀರ್ಥರೆಂದೂ, ಸರ್ವಜ್ಞಾಚಾರ್ಯರೆಂದೂ ಕರೆಯುವುದನ್ನು ಅವರ ಶಿಷ್ಯರಿಂದ ರಚಿತವಾದ ಗ್ರಂಥಗಳಲ್ಲಿ ಕಾಣಬಹುದು. ಆಚಾರ್ಯರ ಗ್ರಂಥರಚನಾ ಶೈಲಿಯು ಅತ್ಯಂತ ಸುಲಭವೂ, ಗಾಂಭೀರ್ಯಯುಕ್ತವೂ, ವ್ಯವಹಾರ ಯೋಗ್ಯವೂ ಆದ ಸತ್ವದ ಸಂದೇಶವಾಗಿದೆ ಎಂಬುದಾಗಿ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಸತ್ವಪೂರಿತ ಸಂದೇಶವನ್ನಿತ್ತ ಮಹಾ ವಿಭೂತಿಪುರುಷರಂದೂ ಮುಂದಿನ ಟೀಕಾಕಾರರೆಲ್ಲಾ ಇವರನ್ನು ಗೌರವದಿಂದ ಹೊಗಳಿರುವುದನ್ನು ಸಾಹಿತ್ಯಾಭ್ಯಾಸದಿಂದ ಅರಿತುಕೊಳ್ಳಬಹುದು.

ಜಗತ್ತು ಮಾತ್ರ ಸತ್ಯ, ಆತ್ಮ ಹಾಗೂ ಪರಮಾತ್ಮ ಎಂಬುದೆಲ್ಲ ಅತೀಂದ್ರಿಯ ಪ್ರಪಂಚ. ಅದು ಕಲ್ಪನಾಜಾಲ ಎಂಬುದು ಭೌತಿಕವಾದವೆನಿಸಿದೆ. ಆತ್ಮವೊಂದೇ ಸತ್ಯ ದೃಶ್ಯಪ್ರಪಂಚವು ಬರೀ ಭ್ರಮೆ ಎಂದು ವಾದಿಸುವ ಸಿದ್ಧಾಂತ ವಾದಿಗಳೂ ಇದ್ದಾರೆ.

ಇಂಥವರನ್ನು ನಿರ್ಗುಣ ಬ್ರಹ್ಮೋಪಾಸಕರೆಂದು ಗುರುತಿಸುವುದುಂಟು. ಆದರೆ ಇಂಥ ವಿಚಾರಗಳೆಲ್ಲ ಅಪೂರ್ಣತೆಯಿಂದ ಕೂಡಿದವುಗಳಾಗಿವೆ. ಕರ್ತವ್ಯ ಎಂದರೆ ಕೇವಲ ಆರಾಧನೆ, ಪೂಜೆ, ಜಪ, ತಪ, ವ್ರತನಿಯಮಾದಿಗಳು ಅಥವಾ ಅವುಗಳ ಅನುಷ್ಠಾನಗಳಿಗೆ ಸೀಮಿತ ಎಂದು ಭಾವಿಸಬಾರದು. ದೀನದಲಿತರ ಸೇವೆಯಲ್ಲಿ ತನ್ನನ್ನು ಸಮರ್ಪಿಸಿಕೊಳ್ಳುವುದು ಅಷ್ಟೇ ಮಹತ್ವದ ಕಾರ್ಯವೆನಿಸುವುದು. ಕಡ್ಡಾಯವಾಗಿ ಈ ಕೆಲಸವನ್ನು ಮಾಡಿಯೇ ತೀರಬೇಕು. ಈ ಮಾತನ್ನು ಸ್ಪಷ್ಟವಾಗಿ ಸಾರಿದವರು ಮಧ್ವಾಚಾರ್ಯರು. ಅವರ ಈ ಸಂದೇಶವನ್ನು ವಿಶ್ವಸಂದೇಶವೆಂದು ಗುರುತಿಸಲಾಗುವುದು. ಆಧ್ಯಾತ್ಮ ಹಾಗೂ ವಿಜ್ಞಾನದ ಜಡವಾದ ಮತ್ತು ಈಶ್ವರ ದೈವ ಪೌರುಷಗಳ ಸಮನ್ವಯ ಭಾವವನ್ನು ಎತ್ತಿ ತೋರಿಸಿದವರು ಆನಂದತೀರ್ಥರು. ಪಂಚಭೇದ ತಾರತಮ್ಯಯುತವಾದ ವಾದವನ್ನು ಬಹು ಸ್ಪಷ್ಟ ರೀತಿಯಲ್ಲಿ ಅವರು ಬಿಡಿಸಿ ತೋರಿಸಿದ್ದಾರೆ. ಎಂಟು ನೂರಾ ನಲ್ವತ್ತು ವರುಷಗಳ ಹಿಂದೆ ಮಂಡಿಸಲಾದ ಈ ಸಿದ್ಧಾಂತವನ್ನು ಜೀವೇಶ್ವರ ಭೇದ ಸಿದ್ಧಾಂತವೆಂದೇ ಗುರುತಿಸಲಾಗುತ್ತದೆ. ಈಶ ಎಂದರೆ ಸೃಷ್ಟಿಕರ್ತನಾದ ಭಗವಂತ. ಇನ್ನು ದಾಸನೆಂದರೆ ಜೀವ. ಈ ಭೇದವಾದ ತತ್ವವನ್ನು ಆಚಾರ್ಯರ ನಂತರ ಬಂದ ಹರಿದಾಸರು ಜನಮನಕ್ಕೆ ಸುಲಭವಾಗಿ ಸ್ಪಂದನವಾಗುವಂತೆ ತಮ್ಮ ಕೃತಿಗಳಲ್ಲಿ ಗೀತರೂಪಕದಲ್ಲಿ ರಚಿಸಿ ತೋರಿಸಿದ್ದಾರೆ. ಆಚಾರ್ಯರ ಮತವು ಭಕ್ತಿಪ್ರಧಾನವಾದ ಮತವೆನಿಸಿಕೊಂಡಿದೆ.

ವಿಜಯದಶಮಿಯ ಶುಭದಿನದಂದು ಕ್ಷೇತ್ರಪಾಲ ಉಡುಪಿಯ ಅನಂತೇಶ್ವರನ ದರ್ಶನ



ಪಡೆದು ಮಧ್ಯಗೇಹಭಟ್ಟರು ಪಾಜಕಕ್ಕೆ ಮರಳಿ ಬಂದಾಗ ತಮ್ಮ ಬಹುದಿನದ ಆಶೆ ನೆರವೇರಿತೆಂಬ ಶುಭವಾರ್ತೆಯನ್ನು ಕೇಳಿದರು. ವಂಶೋದ್ಧಾರಕನ ಜನನವು ಹರ್ಷವನ್ನುಂಟುಮಾಡಿತು. ಕಡುಬಡತನದಲ್ಲಿದ್ದ ಈ ಕುಟುಂಬದ ಪರಿಸ್ಥಿತಿಯನ್ನು ಕಂಡು ಪಕ್ಕದ ಮನೆಯವರು ಮಗುವಿಗಾಗಿ ಹಸುವನ್ನು ತಂದು ಕಟ್ಟಿದರು. ಸುಮುಹೂರ್ತದಲ್ಲಿ ಭಟ್ಟರು ಮಗನಿಗೆ ವಾಸುದೇವ ಎಂದು ನಾಮಕರಣ ಮಾಡಿದರು.

ಪುಟ್ಟ ಬಾಲಕನ ಆಟಪಾಟಗಳನ್ನು ನೋಡುವುದರಲ್ಲಿ ದಂಪತಿಗಳು ಸ್ವರ್ಗಸುಖವನ್ನು ಅನುಭವಿಸತೊಡಗಿದರು. ದಿನಗಳೆದಂತೆಲ್ಲಾ ಅಂಬೆಗಾಲಿಡುವುದನ್ನು ಹಿಂದೆ ತಳ್ಳಿ ಈಗ ಪುಟ್ಟ ಪುಟ್ಟ ಹೆಜ್ಜೆಗಳನ್ನಿಡತೊಡಗಿದನು. ಮನೆ ತುಂಬಾ ಚಲಿಸುತ್ತಿದ್ದ ವಾಸುದೇವ ಇದ್ದಕ್ಕಿದ್ದಂತೆ ಕಾಣೆಯಾದನು. ಆಗ ದಂಪತಿಗಳಿಗೆ ಆಕಾಶವೇ ಕಳಚಿ ಬಿದ್ದಂತಾಯಿತು. ಪರಿಸರವನ್ನೆಲ್ಲ ಶೋಧಿಸಿದರು. ಹತಾಶರಾಗಿ ದೇವನಲ್ಲಿ ಮೊರೆ ಹೋದರು. ಸಾಯಂಕಾಲ ಗೋಧೂಲಿ ಸಮಯದಲ್ಲಿ ಹಸುವಿನ ಬಾಲ ಹಿಡಿದು ವಾಸುದೇವ ಕಾಡಿನಿಂದ ಮರಳಿ ಬರುತ್ತಿರುವುದನ್ನು ಕಂಡಾಗ ಹೋದ ಪ್ರಾಣವೇ ಮರಳಿ ಬಂದಂತೆನಿಸಿತು. ತಾಯಿ ಭರದಿಂದ ಮುಂದೆ ಬಂದು ಮಗುವನ್ನೆತ್ತಿ ಮುದ್ದಾಡಿಧಳು.

ವಿಶ್ವದಲ್ಲಿ ಯಾವ ದೇಶವೇ ಇರಲಿ ಆ ದೇಶದ ಅಥವಾ ರಾಷ್ಟ್ರದ ಹಿರಿಮೆ ಗರಿಮೆಗಳನ್ನು ಅಭ್ಯಾಸ ಮಾಡಹೊರಟಲ್ಲಿ ಮೊದಲು ಆ ದೇಶದ ಸಂಸ್ಕೃತಿಯನ್ನು ಕುರಿತು ಅಭ್ಯಾಸಮಾಡುವುದು ವಿಹಿತ. ಸಂಸ್ಕೃತಿ ಎಂಬ ಶಬ್ದವು ಮೇಲು ನೋಟಕ್ಕೆ ಬಹು ಸುಲಭವೆಂದೆನಿಸಿದರೂ ಅದರ ನೈಜಾರ್ಥವು ಮಾತ್ರ ಗಂಭೀರವಾದುದು. ಅಭ್ಯಾಸಕ್ಕೆ ಆಳವಾದುದು. ಸಂಸ್ಕೃತಿ ಶ್ರದ್ಧಾಭಕ್ತಿಗಳ ದ್ಯೋತಕವೆನಿಸುವುದು. ಈ ಮಾತನ್ನು ಜೀವಂ ನಯತಿ ಇತಿ ಜೀವನಃ -- ಮಾನವನನ್ನು ಸನ್ಮಾರ್ಗದಲ್ಲಿ ಕರೆದೊಯ್ಯುವುದೇ ಜೀವನ ಸಂಸ್ಕೃತಿ ಎಂದೆನಿಸುವುದು. ಇದೇ ಮಾತನ್ನು "ಮಹಾ ಜನೋ ಯೇನ ಗತಃ ಸಪಂಥಾಃ --ಮಹಾತ್ಮರು, ತಪಸ್ವಿಗಳು ತೋರಿಸಿಕೊಟ್ಟ ಮಾರ್ಗದಲ್ಲಿ ಮುನ್ನಡೆಯುವುದೇ ಸಂಸ್ಕೃತಿ ಎಂದೆನಿಸುವುದು. ಇದು ಗೀತಾಚಾರ್ಯನಾದ ಶ್ರೀಕೃಷ್ಣನ ಮಾತು. ಮಧ್ವಾಚಾರ್ಯರು ಶ್ರೀಕೃಷ್ಣನ ಈ ಉಪದೇಶವನ್ನೇ ತಮ್ಮ ಸಂದೇಶದಲ್ಲಿ ಮೂಲಾಧಾರವಾಗಿಟ್ಟುಕೊಟ್ಟು ದ್ವೈತವಾದವನ್ನು ಬಿತ್ತರಿಸಿದರು.

ಬಾಲಕನಾದ ವಾಸುದೇವನು ಬಹು ಕುಶಾಗ್ರಮತಿಯಾಗಿದ್ದನು. ಆತನಿಗೆ ಒಂದು ಸಲ ಹೇಳಿದುದನ್ನು ಪುನಃ ಹೇಳಿಸಿಕೊಳ್ಳುವುದು ಸರಿಬರುತ್ತಿರಲಿಲ್ಲ. ಈ ವಿಲಕ್ಷಣವಾದ ಬುದ್ಧಿಯು ಅನೇಕ ಸಲ ತಂದೆಗೂ ಅಚ್ಚರಿಯನ್ನುಂಟುಮಾಡುತ್ತಿತ್ತು. ಮಗನು ಬೆಳೆದು ದೊಡ್ಡವನಾದಂತೆಲ್ಲಾ ಮಾತಾಪಿತೃಗಳಿಗೆ ಆತನನ್ನು ಉಪನೀತನನ್ನಾಗಿ ಮಾಡಿ ಬಾಲ ವಟುವಿನ ರೂಪದಲ್ಲಿ ಕಂಡು ಆನಂದಪಡುವ ಹಂಬಲ ಬೆಳೆಯತೊಡಗಿತು. ಅದಕ್ಕಾಗಿ ಒಳ್ಳೆಯ ಮುಹೂರ್ತವನ್ನು ನಿಗದಿಪಡಿಸಿಕೊಂಡರು. ದ್ವಿಜತ್ವಸ್ವೀಕಾರ ಮಾಡಿದ ಮಗು (ವಟು) ಮಾತೆ ವೇದವತಿಯ ಮುಂದೆ ಬಂದು ನಿಂತು "ಭವತೀ ಭಿಕ್ಷಾಂ ದೇಹಿ" ಎಂದಾಗ ಆನಂದದಿಂದ ಅವಳ ಕಣ್ಣಾಲಿ ತುಂಬಿ ಬಂದವು. ತನ್ನ ತಾಯಿತನ ಸಾರ್ಥಕವಾಯಿತೆಂದು ಕೃತಾರ್ಥ ಭಾವ ತಾಳಿದಳು. ಭಟ್ಟರು ವಟುವನ್ನು ತೋಟಂತಿಲ್ಲಾಯರಲ್ಲಿ ಪ್ರಾಥಮಿಕ ವಿದ್ಯಾಭ್ಯಾಸಕ್ಕಾಗಿ ಕಳಿಸತೊಡಗಿದರು.

ದಿನಗಳೆಂದಂತೆಲ್ಲಾ ವಾಸುದೇವನು [illegible] ರ್ಮುಖಿಯಾಗತೊಡಗಿದ. ಸಂಸಾರಿಗಳಿಗಿಂತ ಸರ್ವಸಂಗ ಪರಿತ್ಯಾಗವೇ ಯೋಗ್ಯ ಎಂಬ ವಿಚಾರವು ಅಂತರಂಗದಲ್ಲಿ ಮಂಥನಗೊಳ್ಳತೊಡಗಿ[illegible]

# ತಿರುಪತಿಯ ಸ್ಥಳೀಯ ದೇವಾಲಯ ದರ್ಶಿನಿ

ತಿರುಪತಿಗೆ ಬರುವ ಯಾತ್ರಿಕರು ಶ್ರೀವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು;

*ಶ್ರೀ ಗೋವಿಂದರಾಜಸ್ವಾಮಿ ದೇವಾಲಯ*
*ಶ್ರೀ ಕೋದಂಡರಾಮಸ್ವಾಮಿ ದೇವಾಲಯ*
*ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು*
*ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ*
*ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ*

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು. (೨ ಗಂಟೆಗಳಲ್ಲಿ)

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೇಸ್ಟೇಷನ್ ದಕ್ಷಿಣ)

ಬಸ್ ಹೊರಡುವ ಕಾಲ : ಬೆಳಗ್ಗೆ ೬--೦೦, ಬೆಳಗ್ಗೆ ೧೦--೦೦, ಸಂಜೆ ೩--೦೦

ಬಸ್ ಪ್ರಯಾಣದ ದರ : ಒಂದು ಟಿಕೆಟ್ಟಿಗೆ ೨೦ ರೂ ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
(ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ.)

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

**ತಿ. ತಿ. ದೇ.**

ಈ ವಿಚಾರವನ್ನು ಮಾತಾಪಿತೃಗಳಿಗೆ ತಿಳಿಸಿದಾಗ ಅವರು ಗಾಭರಿಗೊಂಡರು. ಇದ್ದೊಬ್ಬ ಮಗನು ಸನ್ಯಾಸಿಯಾದರೆ ಮುಂದೆ ತಮ್ಮ ಗತಿ ಏನು ಎಂದು ಚಿಂತಿಸತೊಡಗಿದರು. ತನಗೊಬ್ಬ ತಮ್ಮನು ಹುಟ್ಟಿದ ಮೇಲಾದರೂ ಸನ್ಯಾಸದೀಕ್ಷೆಗೆ ಅಪ್ಪಣೆ ಕೊಡಿರಿ ಎಂದು ವಾಸುದೇವನು ಅವರನ್ನು ಸಮಾಧಾನಪಡಿಸಿದನು.

ಅಂತರಂಗದಲ್ಲಿ ಸದಾ ಕಾಲವೂ ಚಿಂತಿಸುತ್ತಿದ್ದ ಮನೋಬಯಕೆಯು ಸಿದ್ದಿಸುವ ಯೋಗವು ಸನ್ನಿಹಿತವಾಯಿತು. ಉಡುಪಿಯ ಅನಂತೇಶ್ವರ ದೇವಾಲಯದಲ್ಲಿ ಯತಿಗಳ ಬಿಡಾರವಾಗಿದೆ ಎಂದು ತಿಳಿದೊಡನೆ ಆತನು ಉಡುಪಿಗೆ ಹೊರಟು ಗುರುಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಸನ್ಯಾಸ ದೀಕ್ಷೆಯನ್ನಿತ್ತು ಅನುಗ್ರಹಿಸಬೇಕೆಂದು ಪ್ರಾರ್ಥನೆ ಮಾಡತೊಡಗಿದನು. ಬಾಲಕನ ಮನೋನಿರ್ಧಾರವನ್ನು ಕಂಡು ಅಚ್ಯುತಪ್ರೇಕ್ಷರಿಗೆ ಅಚ್ಚರಿಯೆನಿಸಿತು. ಆತನ ಮುಖಲಕ್ಷಣಗಳನ್ನು ಅವಲೋಕಿಸಿದಾಗ ಈತ ಅಸಾಮಾನ್ಯ ಬಾಲಕನೆಂಬ ಭಾವನೆ ಮೂಡಿತು. ಸುಪ್ರೀತರಾದ ಅಚ್ಯುತಪ್ರೇಕ್ಷರು ನೇತ್ರಾವತಿ ನದಿಯ ದಂಡೆಯ ಮೇಲಿರುವ ಕಾತ್ಯಾಡಿ ಮಠದಲ್ಲಿ ಶಾಸ್ತ್ರೋಕ್ತವಾಗಿ ವಾಸುದೇವನಿಗೆ ಸನ್ಯಾಸದೀಕ್ಷೆಯನ್ನಿತ್ತು "ಪೂರ್ಣಪ್ರಜ್ಞ" ಎಂದು ನಾಮಕರಣ ಮಾಡಿದರು.

ಬಾಲಯತಿಯ ಮುಖವು ಉದಯರವಿಯಂತೆ ತೇಜಃಪುಂಜವಾಗಿ ಕಾಣುತ್ತಿತ್ತು. ಆತನಲ್ಲಡಕವಾದ ಆಧ್ಯಾತ್ಮ ವಿದ್ಯೆಯ ತೇಜಸ್ಸು ಎಂಥವರನ್ನೂ ಆಕರ್ಷಿಸುವಂತಿತ್ತು. ತುಂಬಿದ ದೇಹ, ಮೋಹಕವಾದ ಮೈಕಾಂತಿ, ನೀಳವಾದ ನಾಸಿಕ, ದೀರ್ಘ ಬಾಹುಗಳು, ಕಟ್ಟುಮಸ್ತಾದ ದೇಹಸೌಷ್ಟವವನ್ನು ಕಂಡಾಗ ಜಗತ್ಕಲ್ಯಾಣಕ್ಕಾಗಿ ಧರೆಗಿಳಿದು ಬಂದ ಮಹಾಪುರುಷನೀತ ಎಂಬ ಭಾವನೆಯುಂಟಾಗುತ್ತಿತ್ತು. ದಿನಗಳಿದಂತೆಲ್ಲಾ ಆತನಲ್ಲಡಕವಾಗಿದ್ದ ಆಧ್ಯಾತ್ಮದ ದಿವ್ಯಜ್ಞಾನ ಜ್ಯೋತಿಯನ್ನು ಕಂಡು ಸರಿಯಾದ ಶಿಷ್ಯನನ್ನು ಪಡೆದುಕೊಂಡುದಕ್ಕಾಗಿ ಅಚ್ಯುತಪ್ರೇಕ್ಷರಿಗೆ ಕೃತಾರ್ಥ ಭಾವನೆ ಮೂಡತೊಡಗಿತು.

ಆಶ್ರಮಾನಂತರ ಗುರುಗಳೊಂದಿಗೆ ಕೆಲವು ಕಾಲ ಕಳೆದ ನಂತರ ಪೂರ್ಣಪ್ರಜ್ಞರು ಯತ್ಯಾಶ್ರಮ ಧರ್ಮದಂತೆ ಪರ್ಯಟನಾ ಕಾರ್ಯದಲ್ಲಿ ನಿರತರಾದರು. ಗುರುಗಳ ಅಪ್ಪಣೆ ಪಡೆದು ಮೊದಲು ವಿಷ್ಣುಮಂಗಲ ಗ್ರಾಮಕ್ಕೆ ಬಂದರು. ಅನಂತರ ತಿರುವನಂತಪುರಕ್ಕೆ ಹೋಗಿ ಅನಂತ ಪದ್ಮನಾಭನ ದರ್ಶನ ಪಡೆದು ಮುಂದೆ ರಾಮೇಶ್ವರ, ಕನ್ಯಾಕುಮಾರಿ ಮೊದಲಾದ ದಕ್ಷಿಣ ದೇಶದ ತೀರ್ಥಸ್ಥಳಗಳಲ್ಲಿ ಸಂಚಾರ ಮಾಡಿ ಮರಳಿದರು.

ಪೂರ್ಣಪ್ರಜ್ಞರ ಜೀವನದಲ್ಲಿ ಮಹತ್ವಪೂರ್ಣವಾದ ಒಂದು ಘಟನೆಯು ನಡೆಯಿತು. ಕುಂಬಳೆ ಪ್ರಾಂತದ ಕಾಪು ಎಂಬಲ್ಲಿರುವ ದೇವಸ್ಥಾನದಲ್ಲಿ ಕವಿ ಕುಲತಿಲಕ, ಚತುಃಶಾಸ್ತ್ರ ಕೋವಿದ, ಅದ್ವೈತದರ್ಶನ ಸಾಗರ ಎಂದು ಖ್ಯಾತರಾಗಿದ್ದ ತ್ರಿವಿಕ್ರಮ ಪಂಡಿತಾಚಾರ್ಯರೆಂಬ ಘನವಿದ್ವಾಂಸರೊಡನೆ ಹದಿನೈದು ದಿನಗಳ ಕಾಲ ಏಕಪ್ರಕಾರವಾಗಿ ವ್ಯಾಕ್ಯಾರ್ಥವು ನಡೆಯಿತು. ಪಂಡಿತರು ಮಂಡಿಸಿದ ಪೂರ್ವಪಕ್ಷಗಳಿಗೆಲ್ಲ ಆಚಾರ್ಯ ಮಧ್ವರು ಸಮಾಧಾನಕಾರಕ ಉತ್ತರವನ್ನಿತ್ತು ಅವರ ವಾದವನ್ನು ಖಂಡಿಸಿ ನಿರುತ್ತರರನ್ನಾಗಿ ಮಾಡಿದರು. ಪೂರ್ಣಪ್ರಜ್ಞರ ಸಿದ್ಧಾಂತವೇ ಸರಿಯಾದ ಸಿದ್ಧಾಂತ ಎಂಬುದನ್ನು ಮನದಟ್ಟು ಮಾಡಿಕೊಂಡ ತ್ರಿವಿಕ್ರಮ ಪಂಡಿತಾಚಾರ್ಯರು ತಮ್ಮ ಮಗನಾದ ನಾರಾಯಣ ಪಂಡಿತ ಹಾಗೂ ಶಿಷ್ಯ ಪರಿವಾರದೊಂದಿಗೆ ಆನಂದತೀರ್ಥರಿಗೆ ಶರಣಾಗತರಾಗಿ ದ್ವೈತದೀಕ್ಷೆಯನ್ನು ಪಡೆದುಕೊಂಡರು. ಮುಂದೆ ಪಂಡಿತಾಚಾರ್ಯರ ಮಕ್ಕಳಾದ ನಾರಾಯಣಪಂಡಿತರಿಂದಲೇ ಗುರುಗಳ ಮಹತಿಯನ್ನು ಸಾರುವ "ಸುಮಧ್ವವಿಜಯ" ಎಂಬ ಕಾವ್ಯ ಹೊರಹೊಮ್ಮಿ ಬರುವಂತಾಯಿತು.

ಶ್ರೀಮದಾನಂದತೀರ್ಥರು ತಮ್ಮ ಸಿದ್ಧಾಂತದ ಸಾರವನ್ನು ಈ ರೀತಿಯಲ್ಲಿ ವರ್ಣಿಸಿರುವುದುಂಟು.

ಶೃಣುತಾಮಲ ಸತ್ಯವಚಃ ಪರಮಮ್
ಶಫತೇರಿತ ಮುಚ್ಚಿತ ಬಾಹುಯುಗಂ
ನಹರೇಃ ಪರಮೋ ನಹರೇಸದೃಶಃ
ಪರಮಃ ಸತು ಸರ್ವಚಿದಾತ್ಮಗಣಾತ್

--ಎರಡೂ ಕೈಗಳನ್ನು ಮೇಲೆತ್ತಿ ಶಪಥಪೂರ್ವಕ ಹರಿಯೇ ಪರಮ ದೈವ, ಆತ ಸರ್ವೋತ್ತಮನಾಗಿದ್ದಾನೆ ಎಂದು ಹೇಳ್ಳುವೆ. ಪೂರ್ಣಪ್ರಜ್ಞರು ತಮ್ಮ ಮೂವತ್ತೇಳು ಗ್ರಂಥಗಳಲ್ಲಿ ಸಾರಿದ ದ್ವೈತತತ್ವದ ಸಾರವನ್ನು ವ್ಯಾಸರಾಯರು ಒಂದು ಶ್ಲೋಕದಲ್ಲಿ ಸಂಗ್ರಹರೂಪವಾಗಿ ಹೀಗೆ ಹೇಳಿರುವುದುಂಟು.

ಶ್ರೀಮನ್ಮಧ್ವಮತೇ ಹರಿಃ ನಿರಂತರಃ
ಸತ್ಯಂ ಜಗತ್ ತತ್ವತೋ ಭೇದೋ
ಜೀವಗಣಃ ಹರೇರನುಚರಾಃ
ನೀಚೋಚ್ಚಭಾವಂಗತಾಃ
ಮುಕ್ತಿರ್ನೈಜಸುಖಾನುಭೂತಿರಮಲಾ
ಭಕ್ತಿಶ್ಚ ತತ್ಸಾಧನಂ ಹ್ಯಕ್ಷಾದಿ
ತ್ರಿತಯಂ ಪ್ರಮಾಣ ಮಖಿಲಾ
ಮ್ನಾಯೈಕವೇದ್ಯೋ ಹರಿಃ

ಈ ಶ್ಲೋಕದಿಂದ ಒಂಬತ್ತು ಪ್ರಮೇಯಗಳನ್ನು ವಿವರವಾಗಿ ಬಿಡಿ ಬಿಡಿಸಿ ತೋರಿಸಲಾಗಿದೆ.

ಆಚಾರ್ಯರು ಒಂದು ದಿನ ಸಮುದ್ರ ಸ್ನಾನಕ್ಕೆಂದು ಹೋದಾಗ ಒಂದು ಹಡಗು ಬಿರುಗಾಳಿಗೆ ಸಿಕ್ಕಿ ತತ್ತರಿಸುತ್ತಿರುವುದನ್ನು ಕಂಡರು. ಆಗ ತಮ್ಮ ಯೋಗಬಲದಿಂದ ಆ ನೌಕೆಯು ಸುರಕ್ಷಿತವಾಗಿ ದಡ ತಲುಪುವಂತೆ ನೋಡಿಕೊಂಡರು. ವಿಪತ್ತಿನಿಂದ ಪಾರಾದ ನೌಕೆಯ ಒಡೆಯನು ಆಚಾರ್ಯರ ಸೇವೆಗೆಂದು ಮುಂದೆ ಬಂದು ನಿಂತಾಗ ಆ ನೌಕೆಯಲ್ಲಿರುವ ಎರಡು ಗೋಪೀಚಂದನದ ಗಡ್ಡೆಗಳನ್ನು ಮಾತ್ರ ಬೇಡಿದರು. ಅವುಗಳಲ್ಲಿದ್ದ ಮುದ್ದಾದ ಸಾಲಿಗ್ರಾಮ ಶಿಲೆಯ ವಿಗ್ರಹಗಳಲ್ಲಿ ಒಂದನ್ನು ಮಡಭಾಂಡೇಶ್ವರದಲ್ಲಿಯೂ, ಇನ್ನೊಂದನ್ನು ಉಡುಪಿಯಲ್ಲಿಯೂ ಪ್ರತಿಷ್ಠಾಪನೆ ಮಾಡಿದರು. ಆ ಸುಂದರ ವಿಗ್ರಹವೇ ಕಡೆಗೋಲು ಕೃಷ್ಣನಾಗಿ ಅಷ್ಟಮಠಾಧೀಶರಿಂದ ಇಂದಿಗೂ ಪೂಜೆಗೊಳ್ಳುತ್ತಿರುವನು. ಉಡುಪಿಯಲ್ಲಿರುವ ಅಷ್ಟಮಠಗಳಂತೆ ಘಟ್ಟದ ಮೇಲೆಯೂ ನಾಲ್ಕು ಮಠಗಳನ್ನು ಪ್ರತಿಷ್ಠಾಪನೆ ಮಾಡಿ ಭಾರತದ ಉದ್ದಗಲಕ್ಕೂ ಸಂಚರಿಸಿ ಆ ಮಠಾಧೀಶರು ದ್ವೈತಮತವನ್ನು ಪ್ರಚಾರ ಮಾಡುವಂತೆ ನೋಡಿಕೊಂಡರು.

ಪೂರ್ಣಪ್ರಜ್ಞರು ಕೃತಿಗಳನ್ನು ರಚಿಸಿದಾಗಲೆಲ್ಲಾ ಬದರಿಗೆ ಹೋಗಿ ಶ್ರೀಮನ್ನಾರಾಯಣನಿಗೆ ಗ್ರಂಥಗಳನ್ನು ಸಮರ್ಪಿಸಿ ಬರುತ್ತಿದ್ದರು. ಹೀಗೆ ಮರಳಿ ಬಂದು ಉಡುಪಿಯ ಅನಂತೇಶ್ವರ ದೇವಾಲಯದಲ್ಲಿ ಪಾಠನಿರತರಾದಾಗ ಅವರ ಮೇಲೆ ಹೂವಿನ ಮಳೆ ಸುರಿಯತೊಡಗಿತು. ಶಿಷ್ಯರು ನೋಡ ನೋಡುತ್ತಿದ್ದಂತೆ ಪುನಃ ಅವರು ಬದರಿಗೆ ಪ್ರಯಾಣ ಮಾಡಿದರೆಂದು ಇಂದಿಗೂ ಅದೃಶ್ಯರಾದ ಆ ಸ್ಥಳವನ್ನು ಅನಂತೇಶ್ವರ ದೇವಾಲಯದಲ್ಲಿ ತೋರಿಸುವುದುಂಟು.

ರಜತಪೀಠ ಅಥವಾ ಉಡುಪಿಯಲ್ಲಿ ಅದೃಶ್ಯರಾದರೂ ತಾವು ಬದರೀ ಕ್ಷೇತ್ರದಲ್ಲಿ ದ್ವೈತದೀಕ್ಷಾದಕ್ಷರಾದ ಭಕ್ತರಿಗೆ ಸದಾ ಕಾಲವೂ ದರ್ಶನವನ್ನೀಯಲು ವಾಸವಾಗಿರುತ್ತೇನೆ ಎಂದು ಆಚಾರ್ಯರೇ ಹೇಳಿರುವುದಾಗಿ ತಿಳಿದುಬರುವುದು.

ಆಚಾರ್ಯ ಮಧ್ವರ ಸಿದ್ಧಾಂತವನ್ನು ಕೊನೆಯ ಸಿದ್ಧಾಂತವೆಂದೂ ನಂಬುವುದುಂಟು. ಜೀವೇಶ್ವರ ಭೇದವಾದವನ್ನು ವಿಶ್ವಕ್ಕೆ ನೀಡಿದ ಮಹಾದಾರ್ಶನಿಕರೆಂದು ಭಾವಿಸಿ ಚೈತನ್ಯ ಸಂಪ್ರದಾಯವಾದಿಗಳಾದ ಹರೇ ರಾಮ ಪಂಥದವರು ಇಂದು ಅವರ ಈ ಸಂದೇಶವನ್ನು ವಿಶ್ವವ್ಯಾಪ್ತವಾಗಿ ಸಾರುತ್ತಿರುವುದನ್ನು ನಾವು ನೋಡಬಹುದು.



# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ

ಭೂಮಿಯ ಒಂದು ವಿಶಿಷ್ಟ ಗುಣ ಇಲ್ಲಿನ ಹಸಿರು. ಗಿಡವಾಗಿ, ಮರವಾಗಿ, ವನವಾಗಿ, ಕಾಡಾಗಿ ಮನುಷ್ಯನ ಜೊತೆಗೇ ಬೆಳೆದು ಭೂಮಿಯ ಮೇಲಿನ ಮನುಷ್ಯನ ಇರವನ್ನು ಅರ್ಥಪೂರ್ಣ ಆಗಿಸಿರುವುದು ಹಸಿರು. ತಿರುಮಲೆಯ ಕಾಡುಗಳು ಶ್ರೀ ವೆಂಕಟೇಶ್ವರಸ್ವಾಮಿಯ ಸೇವೆಯಲ್ಲಿ ಪರಂಪರೆಯಿಂದ ನೀರುನೆರಳಿನ ತಾಣವಾಗಿ ಪ್ರಸಿದ್ಧಿ ಪಡೆದದ್ದು ಉಂಟು. ಅಂತಹ ಹಿರಿಮೆಯ ಪರಿಸರವನ್ನು ರಕ್ಷಿಸಲು 1981 ರಲ್ಲಿ 25 ಲಕ್ಷ ವೃಕ್ಷಗಳನ್ನು ಬೆಳೆಸುವ ವನಸಂರಕ್ಷಣೆಯ ಕಾರ್ಯಕ್ರಮವನ್ನು ಕೈಗೆತ್ತಿಕೊಳ್ಳಲಾಯಿತು. ಅದರ ಯಶಸ್ವಿ ಅನುಷ್ಠಾನದಿಂದ ಸ್ಫೂರ್ತವಾಗಿ ಹಲವಾರು ವನಾಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಾರ್ವಜನಿಕರನ್ನೂ ಈ ಪರಿಸರ ಪರಿರಕ್ಷಣೆಯ ಪವಿತ್ರಕಾರ್ಯದಲ್ಲಿ ಪಾಲುಗೊಳ್ಳಲು ಯೋಜನೆಗಳನ್ನು ರೂಪಿಸಲಾಗಿದೆ. ಅವುಗಳಲ್ಲಿ ಹಲವು ಈ ರೀತಿ ಇವೆ.

## ವೃಕ್ಷ ಸಂವರ್ಧನ ಯೋಜನೆ :

ಒಂದು ಎಕರೆ ಸ್ಥಳದಲ್ಲಿ ರೂ. 15,000 ರೂಪಾಯಿ ನೀಡಿದವರ ಹೆಸರಿನಲ್ಲಿ ಉಪವನವನ್ನು ಬೆಳೆಸಲಾಗುವುದು. ದಾನಿಗಳಿಗೆ ಹತ್ತು ವರ್ಷಗಳಕಾಲ ಪ್ರತಿವರ್ಷದಲ್ಲಿ ಎರಡು ದಿನ ತಿರುಮಲೆಯಲ್ಲಿ ಉಚಿತ ವಸತಿ ನೀಡಿ ಅವರಿಗೆ ಈ ಕಾಲದಲ್ಲಿ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವೃಕ್ಷ ಪ್ರಸಾದ :

ಪ್ರತಿವರ್ಷವೂ ನೂರು ಹೂ ಹಣ್ಣು ಬಿಡುವ ಸಸಿಗಳನ್ನು ಬೆಳೆಸುವ ಈ ಯೋಜನೆಯಲ್ಲಿ ದಾನಿಗಳ ಹೆಸರಿನಲ್ಲಿ ಪ್ರತಿವರ್ಷವೂ ನೂರು ಗಿಡಗಳನ್ನು ವಿತರಣೆ ಮಾಡಲಾಗುವುದು ಹತ್ತು ಸಾವಿರ ರೂಪಾಯಿಗಳ ದಾನದಿಂದ ಈ ಯೋಜನೆಯಲ್ಲಿ ಪಾಲುಗೊಳ್ಳುವ ದಾನಿಗಳಿಗೆ ಪ್ರತಿವರ್ಷವೂ ಎರಡುದಿನ ತಿರುಮಲೆಯಲ್ಲಿ ಉಚಿತ ವಸತಿ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ಸ್ಮಾರಕ ವನ :

ಒಂದೆಡೆ ಹತ್ತು ಮರಗಳನ್ನು 5 ವರ್ಷ ನೋಡಿಕೊಳ್ಳುವ ಈ ಯೋಜನೆಯಲ್ಲಿ 2000 ರೂ. ಗಳನ್ನು ನೀಡುವ ದಾನಿಗಳ ಹೆಸರನ್ನೆ ಈ ತರುಸಮೂಹಕ್ಕೆ ನೀಡಲಾಗುವುದು ಐದು ವರ್ಷಗಳ ಕಾಲ ವರ್ಷಕ್ಕೆ ಒಮ್ಮೆ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವನಸಂರಕ್ಷಣ ಭಾಗಸ್ವಾಮ್ಯ :

ಏಳು ಬೆಟ್ಟಗಳ ವನಾಚ್ಛಾದನೆಯನ್ನು ಸಂರಕ್ಷಿಸುವ ಉದ್ದೇಶದ ಈ ಯೋಜನೆಯಲ್ಲಿ 1000 ರೂ.ಗಳ ದಾನದಿಂದ ಪಾಲುಗೊಳ್ಳಬಹುದು. ದಾನಿಗಳ ಹೆಸರನ್ನು ಮುಖ್ಯವಾಗಿ ಪ್ರದರ್ಶಿಸಲಾಗುವುದು. ಅವರ ಐದು ಮಂದಿಗೆ ಒಂದು ವರ್ಷ ವಿಶೇಷ ಪ್ರವೇಶದಲ್ಲಿ ದರ್ಶನಾವಕಾಶ ನೀಡಲಾಗುವುದು.

## ಅಧ್ಯಯನ ವನಗಳು :

ಸಸ್ಯವನದಲ್ಲಿ ಒಂದು ಬಗೆಯ ಸಸ್ಯದ ವಿಶೇಷ ಆರೈಕೆ ಮಾಡಲಾಗುವುದು. ಸಸ್ಯದ ಬಳಿ ದಾನಿಯ ಹೆಸರಿನ ಪಲಕ ವಿಡಲಾಗುವುದೆ ಇದಕ್ಕೆ ದಾನ ನೀಡಬೇಕಾದ ಮೊತ್ತ ರೂ. 500/–

## ವೃಕ್ಷ ದತ್ತತೆ :

ತಿರುಮಲೆಯ ಹಾದಿಯಲ್ಲೂ ಬೀದಿ ಬದಿಗಳಲ್ಲೂ ವೃಕ್ಷಗಳನ್ನು ಬೆಳೆಸುವ ಈ ಯೋಜನೆಯಲ್ಲಿ 250 ರೂ. ನೀಡಿದವರ ಹೆಸರನ್ನು ಮರದ ಬಳಿ ಫಲಕದಲ್ಲಿ ಪ್ರದರ್ಶಿಸಲಾಗುವುದು.

ತಿರುಮಲೆಯ ಅರಣ್ಯವು ನಮ್ಮ ಪರಂಪರೆಯ ಕೊಡುಗೆಯಾಗಿದ್ದು ಅದನ್ನು ರಕ್ಷಿಸಿ ಮುಂದಿನ ಪೀಳಿಗೆಗೆ ತಲುಪಿಸುವ.

ದಶಕೂಪ ಸಮೋವಾಪಿ ದಶವಾಪಿ ಸಮೋ ಹ್ರದ
ದಶ ಹ್ರದ ಸಮಃ ಪುತ್ರ ದಶಪುತ್ರ ಸಮೋ ದ್ರುಮ

ಹತ್ತು ಬಾವಿಗಳು ಒಂದು ಕೆರೆಗೂ ಹತ್ತು ಕೆರೆಗಳು ಒಂದು ಸರೋವರಕ್ಕೂ ಹತ್ತು ಸರೋವರಗಳು ಒಬ್ಬ ಮಗನಿಗೂ ಹತ್ತು ಗಂಡುಮಕ್ಕಳು ಒಂದು ತರುವಿಗೂ ಸಮ.

ದಯವಿಟ್ಟು ಈ ಉದಾತ್ತ ಯೋಜನೆಗಳಲ್ಲಿ ಭಾಗಿಗಳಾಗಬೇಕೆಂದು ಭಕ್ತ ಬಂಧುಗಳಲ್ಲಿ ವಿನಂತಿಸಲಾಗಿದೆ.

ತಮ್ಮ ದಾನಗಳನ್ನು ಕಳುಹಿಸಬೇಕಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ,**
ತಿ. ತಿ. ದೇವಸ್ಥಾನಗಳು,
ತಿರುಪತಿ -- 517 507.

# ಮಧ್ವಾಚಾರ್ಯರ ಕೊಡುಗೆ

---ಡಾ. ವಿ. ಎನ್. ಶೇಷಗಿರಿರಾವ್.

ಶ್ರೀಮಧ್ವಾಚಾರ್ಯರು ದ್ವೈತ ವೇದಾಂತದ ಸಂಸ್ಥಾಪಕ ಪ್ರತಿಪಾದಕರಾಗಿದ್ದಾರೆ. ಅವರ ಕಾಲ ಕ್ರಿ.ಶ. ಹದಿಮೂರನೇ ಶತಮಾನ. ಕರ್ನಾಟಕದ ದಕ್ಷಿಣಕನ್ನಡ ಜಿಲ್ಲೆಯ ಉಡುಪಿಗೆ ಸಮೀಪವಾದ ಪಾಜಕ ಕ್ಷೇತ್ರದಲ್ಲಿ ಅವರ ಜನನವಾಯಿತು. ಶ್ರೀ ಮಧ್ಯಗೇಹ ಭಟ್ಟ ಮತ್ತು ಶ್ರೀಮತಿ ವೇದವತಿ ಎಂಬ ದಂಪತಿಗಳ ಯೋಗ ಜೀವನದ ಹಣ್ಣು ಶ್ರೀ ಮಧ್ವಾಚಾರ್ಯರು. ಕರ್ನಾಟಕಕ್ಕೆ ಆ ಪುಣ್ಯವಿತ್ತು! ವಾಸುದೇವನ ಜನನವಾಯಿತು. ಬ್ರಹ್ಮಚರ್ಯಾಶ್ರಮದಿಂದ ನೇರವಾಗಿ ಅಚ್ಯುತ ಪ್ರೇಕ್ಷಗುರುಗಳಿಂದ ದೀಕ್ಷೆ ಪಡೆದು ಶ್ರೀ ಮಧ್ವಮುನಿಗಳಾದರು. ಅವರಿಗೆ ವೇದಶಾಸ್ತ್ರಪುರಾಣಾದಿಗಳು ಅಂಗೈಯಲ್ಲಿನ ನೆಲ್ಲಿಕಾಯಿ. ಅವರದು ಭೀಮಕಾಯ, ಧೀಮಂತ ಮುಖಮುದ್ರೆ, ಆಳವಾದ ತತ್ವಚಿಂತನೆ.

ಶ್ರೀ ಮಧ್ವಾಚಾರ್ಯರ ಹೆಸರು ಭಕ್ತಿಯ, ಆನಂದದ ಚಿಲುಮೆಯನ್ನು ಉಕ್ಕಿಸುವಂಥಾದ್ದು; ಆನಂದತೀರ್ಥರೆಂದು ಅವರಿಗೆ ಮತ್ತೊಂದು ಹೆಸರು! ಭಾರತದ ಆಧ್ಯಾತ್ಮಿಕ ಪರಂಪರೆಯಲ್ಲಿ ಅವರ ಸ್ಥಾನ ಅತ್ಯಂತ ಮಹತ್ವದ್ದು. ಅವರು ಜಗಜ್ಯೋತಿ, ಯುಗ ಪ್ರವರ್ತಕರು. ಲೋಕಾತೀತ ಪ್ರೇಮದ ಮಹಾನ್ ಗಾಥೆಯಾದ ಭಾಗವತದ ಪರಮಭಕ್ತರು. ಅವರ ಸ್ಫಟಿಕಸದೃಶ ಪರಿಶುದ್ಧ ಹೃದಯದಿಂದ ಹೊರಹೊಮ್ಮಿದ ಜ್ಯೋತಿಯ ಕಿರಣವೆಂದರೆ ಜ್ಞಾನ--ಭಕ್ತಿ--ವೈರಾಗ್ಯದೋಧಕವಾದ, ಲೋಕೋಪಕಾರ ನಿರತ ನಿರಂತರ ಭಗವತ್ ಪ್ರೇಮ. ಭಗವಂತನಲ್ಲಿನ ಅನನ್ಯ ಭಕ್ತಿ, ಲೋಕವ್ಯವಹಾರಗಳಲ್ಲಿ ನಿರಂತರವಾಗಿ ಜೀವನದ ಸಂಕಷ್ಟಗಳನ್ನು ಎದುರಿಸುವವರಿಗೆ ಅಸಮಾನ್ಯ ನಿರ್ಭೀತಿಯನ್ನೂ, ಪ್ರಾಮಾಣಿಕ ನಿಷ್ಠೆಯನ್ನೂ ತಂದುಕೊಡುತ್ತದೆಂದು ಶ್ರೀ ಮಧ್ವಾಚಾರ್ಯರು ಸಾರಿದರು. ಅವರದು ಲೋಕ ಸಂಗ್ರಹ ಕಾರ್ಯ. ಅವರು ಜಗದ್ವಂದ್ಯರು.

ಶ್ರೀ ಮಧ್ವಾಚಾರ್ಯರ ಸಿದ್ಧಾಂತಗಳು ಒಂದು ದೀಪಮಾಲೆ ಇದ್ದಂತೆ. ಒಂದೊಂದೂ ಮಿಂಚಿನ ಮಾಲೆ. ಒಂದೊಂದು ಮಿಂಚಿನ ಹೊಳೆತದಲ್ಲಿ ಒಂದೊಂದು ಸತ್ಯದ ದರ್ಶನವಾಗುತ್ತದೆ. ಮಾನವರು ಬಾಳಬೇಕಾದ ದಿವ್ಯಭವ್ಯ ಪ್ರೀತಿ ಪುರಸ್ಸರ ಜೀವನದಲ್ಲಿ ಲಕ್ಷ್ಮೀ ಮನೋಹರನ ಮಹತ್ವವನ್ನೂ ಆತನಲ್ಲಿ ಮಾನವನ ಅವಿಚ್ಛಿನ್ನ ಭಕ್ತಿಯ ಆವಶ್ಯಕತೆಯನ್ನು ಶ್ರೀ ಮಧ್ವಾಚಾರ್ಯರು ಲೋಕಕ್ಕೆ ಸಾರಿದ್ದಾರೆ.

ಶ್ರೀ ಮಧ್ವಾಚಾರ್ಯರ ಗ್ರಂಥರಾಶಿ ಅಪಾರವಾದುದು. ಅವರ ಶೈಲಿ ಪ್ರತಿಭಾಯುಕ್ತವಾದುದು. ವಾದದ ತಿರುಳನ್ನು ನಾಲ್ಕೇ ಶಬ್ದಗಳಲ್ಲಿ ಚಿತ್ರಿಸುವ ಅವರ ಚಮತ್ಕಾರ ಹಿರಿದಾದುದು. ಅವರ ಬರಹಗಳಲ್ಲಿ ತರ್ಕದ ಚಾಕಚಕ್ಯತೆಯಿದೆ, ಶ್ರದ್ಧೆ ಗಾಂಭೀರ್ಯವಿದೆ, ಭಾರತೀಯ ತತ್ವಶಾಸ್ತ್ರದಲ್ಲಿ ಅವರ ಸ್ಥಾನ ಅವರದೇ ಆಗಿ ಸದಾ ವಿಜೃಂಭಿಸುತ್ತಿದೆ. ಭಗವಂತನೇ ಅವರ ದರ್ಶನದ ಕೇಂದ್ರಬಿಂದು. ಭಗವಂತನ ಗುಣೋತ್ಕರ್ಷ ಮಾಡುವಾಗ ಶ್ರೀ ಮಧ್ವಾಚಾರ್ಯರು ಇಷ್ಟಕ್ಕೇ ಏಕೆ ನಿಲ್ಲಿಸಿದರು ಎಂದೆನಿಸುವಷ್ಟು ಮೋಹಕ ಚೆಲುವಿದೆ ಅವರ ಬರಹಗಳಲ್ಲಿ! ಮಾನವಕೋಟಿಯ ಅನಂತವೈವಿಧ್ಯತೆಯ, ವೈವಿಧ್ಯಮಯ ಜೀವನದ ಸಮರಸ ಏಕತಾನವೇ ಅವರ ದರ್ಶನದ ಅದ್ಭುತ ಸಂದೇಶ, ದಿವ್ಯಶಕ್ತಿ ಸಂಜೀವಿನಿ.

ಶ್ರೀ ಮಧ್ವಾಚಾರ್ಯರ ದರ್ಶನವನ್ನು 'ದ್ವೈತ' ಎಂದು ಕರೆಯಲಾಗಿದೆ. 'ದ್ವೈತ' ಎಂದರೆ ಎರಡು ಎಂದು ಅರ್ಥ. ತಿಳಿಯಬೇಕಾದ ಎಲ್ಲ ಸತ್ವಗಳನ್ನು ಅವರು ಕೇವಲ ಎರಡೇ ಎರಡು ತತ್ವಗಳಾಗಿ ವಿಂಗಡಿಸುತ್ತಾರೆ. ಒಂದು ಸ್ವತಂತ್ರ ತತ್ವವಾದ ಭಗವಂತ; ಮತ್ತೊಂದು ಅಸ್ವತಂತ್ರ ತತ್ವಗಳಾದ ಜೀವಾತ್ಮ ಮತ್ತು ಜಗತ್ತುಗಳು, ಹೀಗೆ, ಏನೇನು ಇದೆಯೋ ಅದೆಲ್ಲವನ್ನು ಕೇವಲ ಎರಡೇ ಎರಡು ತತ್ವಗಳಾಗಿ ವಿಂಗಡಿಸಿ, ಸ್ವತಂತ್ರ ತತ್ವವಾದ ಭಗವಂತನಮಹಾತ್ಮೆಯನ್ನು ಕೊಂಡಾಡುವ ಈ ದರ್ಶನವನ್ನು 'ದ್ವೈತ' ಎಂದು ಪ್ರತಿಪಾದಿಸಿರುವುದು ಬಹಳ ಸಮಂಜಸವಾಗಿದೆ. ಈ ದರ್ಶನಕ್ಕೆ 'ತತ್ವವಾದ' ಎಂಬ ಮತ್ತೊಂದು ಹೆಸರುಂಟು. 'ತತ್ವವಾದ' ಎಂದರೆ ಇದ್ದುದನ್ನು ಇದ್ದಹಾಗೆಯೇ, ಸ್ವಲ್ಪವೂ ವಿರೂಪಗೊಳಿಸದೆ ತಿಳಿಸುವ ನಿಷ್ಠುರ ವಾಸ್ತವವಾದ. ಸತ್ಯ ನಿಷ್ಠುರವಾದ ಮಾತ್ರಕ್ಕೆ ಅದನ್ನು ಮರೆಮಾಚಬೇಕು ಎಂಬುದನ್ನು ಶ್ರೀ ಮಧ್ವಾಚಾರ್ಯರು ಒಪ್ಪುವುದಿಲ್ಲ. ಅದನ್ನು ಪ್ರಕಾಶಪಡಿಸಬೇಕೆಂಬುದೇ ವೇದಾಂತದ ಘಟಾನುಘಟಿಯಾದ ಅವರ ಸಿಂಹನಾದ. ಶ್ರೀ ಮಧ್ವರ ದರ್ಶನವನ್ನು 'ಭೇದವಾದ' ಎಂದೂ ಕರೆಯಲಾಗಿದೆ. ಏಕೆಂದರೆ ಅದು ಭಗವಂತ, ಜೀವಾತ್ಮ ಮತ್ತು ಜಗತ್ತುಗಳ ನಡುವೆ ಪರಸ್ಪರ ತಾತ್ವಿಕ ಭೇದವನ್ನು ಪ್ರತಿಪಾದಿಸುತ್ತದೆ. ಜಗತ್ತಿನಲ್ಲಿ ಒಂದು ವಸ್ತು ಇದ್ದಹಾಗೆ ಮತ್ತೊಂದು ಇಲ್ಲ. ಒಂದೊಂದೂ ವಿಶಿಷ್ಟ. ಹಾಗೆಯೇ ಪ್ರತಿಯೊಂದು ಜೀವಾತ್ಮನೂ ಸ್ವರೂಪದಿಂದ ವಿಶಿಷ್ಟನಾದವನು; ತನ್ನದೇ ಆದ ನಿರಂತರ ವ್ಯಕ್ತಿತ್ವವನ್ನು ಹೊಂದಿ, ಅಸ್ತಿತ್ವ, ಕ್ರಿಯೆ, ಜ್ಞಾನ ಮತ್ತು ಎಲ್ಲಕ್ಕೂ ಭಗವಂತನನ್ನು ಆಶ್ರಯಿಸಿಕೊಂಡಿರುವವನು. ವಸ್ತುಗಳು ಅಸಂಖ್ಯಾತ; ಜೀವಾತ್ಮರುಗಳೂ ಅಸಂಖ್ಯಾತ ಎಂದು ಶ್ರೀ ಮಧ್ವಾಚಾರ್ಯರು ಜೈವಿಕಬಹುತ್ವವಾದವನ್ನು ಪ್ರತಿಪಾದಿಸುತ್ತಾರೆ.

ಶ್ರೀ ಮಧ್ವಾಚಾರ್ಯರ ಸಿದ್ಧಾಂತದ ಮುಖ್ಯ ಅಂಶಗಳನ್ನು ಸಂಗ್ರಹಿಸಿ ಹೀಗೆ ಹೇಳಬಹುದು. ಭಗವಂತನೊಬ್ಬನೇ ಸರ್ವೋತ್ತಮನು; ಚೇತನ ಮತ್ತು ಅಚೇತನಗಳಿಗಿರುವ ಭೇದ ಸತ್ಯವಾದುದು, ಮೂಲಭೂತವಾದುದು, ಹಾಗೂ ಪಾರಮಾರ್ಥಿಕವಾದುದು; ಇತರ ಕೆಲವು ದರ್ಶನಗಳು ಹೇಳುವ ಹಾಗೆ ಭೇದ ಸಾಪೇಕ್ಷವಾದುದಲ್ಲ, ತೋರಿಕೆಯದಲ್ಲ! ಜೀವಾತ್ಮ ಜಗತ್ತು ಮತ್ತೆಲ್ಲವೂ ಭಗವಂತನ ಅಧೀನ; ಅವುಗಳೆಲ್ಲ ಆತನ ಸೇವಕರು. ಜಗತ್ತು ಸತ್ಯವಾದುದು; ಭಗವಂತನಷ್ಟೇ ಸತ್ಯವಾದುದು, ಮಿಥ್ಯೆಯಲ್ಲ, ತೋರಿಕೆಯಲ್ಲ. ಅಚೇತನವಾದ ಮಾತ್ರಕ್ಕೆ ಅದು ತನ್ನ ಅಸ್ತಿತ್ವವನ್ನಾಗಲೀ, ಸತ್ಯತೆಯನ್ನಾಗಲೀ ಕಳೆದುಕೊಳ್ಳುವುದಿಲ್ಲ ಜೀವಾತ್ಮರುಗಳು ಜೀವನದ ಧ್ಯೇಯವಾದ, ಮೋಕ್ಷವನ್ನು ಹೊಂದಲು ಇರುವ 'ಸಾಧನಭೂಮಿ'ಯೇ ಈ ಜಗತ್ತು. ಜೀವಾತ್ಮನ ಸ್ವರೂಪಾನಂದದ ಅಭಿವ್ಯಕ್ತಿಯೇ ಮುಕ್ತಿ. ಅಂತಹ ಮೋಕ್ಷಕ್ಕೆ ನಿರ್ಮಲವಾದ ಭಕ್ತಿಯೇ ಸಾಧನ; ಭಗವಂತನನ್ನು ವೇದಗಳಿಂದ ಮಾತ್ರ ತಿಳಿಯಬಹುದು. ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ (ವೇದ) -- ಇವುಗಳೇ ಜ್ಞಾನವನ್ನು ಹೊಂದಲು ಇರುವ ಮೂರು ಪ್ರಮಾಣಗಳು.

ಸರ್ವ ಕಲ್ಯಾಣಕ್ಕೂ ಭಗವಂತನ, ಕೃತಿಯೇ ಕಾರಣ. ಪರಮಗತಿಯಾದ ಮೋಕ್ಷ ಹಾಗೂ ಅದರ ಸಾಧನವಾದ ಭಕ್ತಿ ಮತ್ತು ವೈರಾಗ್ಯಗಳು ಆತನ ವರ. ಭಗವಂತನನ್ನು ಶ್ರೀ ಮಧ್ವಾಚಾರ್ಯರು ಪ್ರೀತಿಯಿಂದ ವಿಷ್ಣು, ಶ್ರೀಹರಿ, ನಾರಾಯಣ, ವಾಸುದೇವ ಮುಂತಾದ ನಾಮಗಳಿಂದ ಕರೆಯುತ್ತಾರೆ. ಭಗವಂತ ಉನ್ನತೋನ್ನತ ವ್ಯಕ್ತಿತ್ವ ಉಳ್ಳವನು; ಆತ್ಮಪ್ರಜ್ಞೆಯುಳ್ಳ ಪುರುಷೋತ್ತಮ. ಆತನು ವೇದಗಳ ಅಂತಿಮ ತಾತ್ಪರ್ಯ; ಆತನೇ ಅವುಗಳ ಅಂತಿಮ ಮಹಿಮೆ ಎಂದು ಶ್ರೀ ಮಧ್ವರು ಸಾರುತ್ತಾರೆ. ವೇದಗಳನ್ನು ಬಿಟ್ಟು ಆತನನ್ನು ಮತ್ತಾವ ಪ್ರಮಾಣದಿಂದಲೂ ಅರಿಯಲು ಸಾಧ್ಯವಿಲ್ಲ. ಆತನು ಅಶೇಷ ಗುಣಸಂಪತ್ ಭರಿತನು, ಸರ್ವದೋಷರಹಿತನು,

ಸರ್ವಜ್ಞ, ಸರ್ವಶಕ್ತ, ಸರ್ವಾಂತರ್ಯಾಮಿ, ಸರ್ವವ್ಯಾಪಿ. ಸಕಲವೂ ಆತನ ಅಧೀನ. ಆತನು ಮಾತ್ರ ಸರ್ವ ಸ್ವತಂತ್ರ. ಆತನು ನಿರ್ಗುಣನಲ್ಲ; ಗುಣಾತ್ಮಕ ವೈಭವದಿಂದ ತುಂಬಿತುಳುಕಿ ಮೆರೆಯುತ್ತಿರುವನು; ಅನಂತಕಲ್ಯಾಣಗುಣ ಪರಿಪೂರ್ಣ, ದಯಾನಿಧಿ, ಕಾರುಣ್ಯಸಿಂಧು, ಭಕ್ತವತ್ಸಲ. ಶ್ರೀ ಮಧ್ವರ ಭಗವಂತ ನಿಷ್ಕ್ರಿಯ ಪುರುಷನಲ್ಲ; ಚರಾಚರ ಜಗತ್ತಿನಲ್ಲಿ ಜಗದ್ವ್ಯಾಪಾರದಿಂದ ಅಂತರ್ಯಾಮಿಯಾಗಿರುವವನು. ಆತನು ಪರಿಪೂರ್ಣನು, ಆತ್ಮತೃಪ್ತನು. ಆತನು, ಶ್ರೀ ಮಧ್ವರ ಪ್ರಕಾರ, ಅಪಾರ ಸಮೃದ್ಧಿಯ, ಅಪಾರ ಶಕ್ತಿಯ ಕ್ರಿಯಾಶೀಲನಾದ ಮೂಲ ಸೃಷ್ಟ್ಯಾತ್ಮಕ ಭಗವಂತ. ಪ್ರಕೃತಿ ಮತ್ತು ಜೀವಾತ್ಮರ ಗುಣಗಳು ಮತ್ತು ಗುಣದೋಷಗಳು -- ಇವುಗಳಿಂದ ದೂರನಾದವನು ಎಂಬ ನೈಜ ಅರ್ಥದಲ್ಲಿ ಮಾತ್ರ, ಭಗವಂತನನ್ನು ನಿರ್ಗುಣನೆನ್ನಬಹುದು. ಉಪನಿಷತ್ತುಗಳಲ್ಲಿ ಬರುವ 'ನಿರ್ಗುಣ' ಪದಕ್ಕೆ ಇದೇ ಸಮಂಜಸವಾದ ಅರ್ಥವೆಂದು ಶ್ರೀ ಮಧ್ವರು ವ್ಯಾಖ್ಯಾನಿಸುತ್ತಾರೆ. 'ಭಗವಾನ್ ಅನಂತಃ ಅನಂತ ಗುಣಾರ್ಣವಃ' ಆತನು ಸದ್ಗುಣ ಸಂಪತ್ತಿನ ನಿಧಿ ಎಂದು ಶ್ರೀ ಮಧ್ವರು ಭಗವಂತನ ಗುಣೋತ್ಕರ್ಷವನ್ನು ಮಾಡುತ್ತಾರೆ. ಆತನ ಕಾರ್ಯವಿಧಾನ ನಿಜಕ್ಕೂ ಅದ್ಭುತ. ಶ್ರೀ ಮಧ್ವರಿಗೆ ಭಗವಂತ 'ಸೌಂದರ್ಯನಿಧಿ'ಯೂ ಆಗಿದ್ದಾನೆ. ಆತನು ಚಿನ್ಮಯರೂಪಿ, ವರ್ಣನಾತೀತ ಆನಂದಪ್ರದ. ಆತನು ಅತೀವ ಸೌಂದರ್ಯದ, ಚೈತನ್ಯದ ಕಡುಚೆಲುವ ರೂಪರಾಶಿ; ಭೌತಿಕ ಉಪಾಧಿಯಲ್ಲ ಎಂದು ಶ್ರೀ ಮಧ್ವರು ಸ್ತುತಿಸುತ್ತಾರೆ. ಸ್ತೋತ್ರಕಾವ್ಯಗಳ ರಚನೆಯಲ್ಲಿ ಶ್ರೀ ಮಧ್ವರದು ಎತ್ತಿದ ಕೈ. 'ದ್ವಾದಶಸ್ತೋತ್ರ' ಎಂಬ ಮಹಾ ಸ್ತೋತ್ರಕಾವ್ಯದಲ್ಲಿ, ಭಗವಂತನ ಸೌಂದರ್ಯದಲ್ಲಿ ಅವರು ತಲ್ಲೀನರಾಗುತ್ತಾರೆ, ಆನಂದಪರವಶರಾಗಿ ಮೈಮರೆಯುತ್ತಾರೆ; ಶ್ರೀಮತ್ ಭಾಗವತದ ದಿವ್ಯಸ್ಮರಣೆಯನ್ನು ನಮ್ಮ ಮುಂದಿಡುತ್ತಾರೆ.

ಭಗವಂತ ಮತ್ತು ಜೀವಾತ್ಮರ ನಡುವಿನ ಭೇದ, ಶ್ರೀ ಮಧ್ವರ ಪ್ರಕಾರ ಸತ್ಯವಾದುದು, ಪಾರಮಾರ್ಥಿಕವಾದುದು; ಅದು ತೋರಿಕೆಯಲ್ಲ, ಉಪಾಧಿಯಿಂದ ಉಂಟಾದುದಲ್ಲ. ಜೀವಾತ್ಮ ಸತ್ಯ; ಸಂಘಾತ ವಸ್ತುವಲ್ಲ. ಜೀವಾತ್ಮ ಭಗವಂತನಷ್ಟೇ ಸತ್ಯ; ಆದರೆ ಮಿತ. ಜೀವಾತ್ಮ ನಿತ್ಯ, ಸತ್ಯವಾದ ಜೀವಾತ್ಮ ನಿತ್ಯನಾದರೂ ಅಸ್ವತಂತ್ರ. ಆತನು ಅವಿನಾಶಿ, ಅವಿಭಾಜ್ಯ ಅಣುಸ್ವರೂಪಿ. ಆತನು ಅಣುಸ್ವರೂಪಿಯಾದರೂ, ಜ್ಞಾನಶಕ್ತಿ ಕೇಂದ್ರದಿಂದ ಹರಡಿ ವಸ್ತುವನ್ನು ಆವರಿಸುತ್ತದೆ. ಆತನು ಪ್ರಕೃತಿ ಜನ್ಯನಲ್ಲ; ಪ್ರಕೃತಿಯಲ್ಲಿ ಲಯವಾಗುವವನಲ್ಲ. ಜೀವಾತ್ಮನೆಂದರೆ, ಸಂಸಾರಾವಸ್ಥೆಯಲ್ಲಿ ಮಾತ್ರ ಮುಂದುವರಿಯುವ ತಾತ್ಕಾಲಿಕ ಅವಸ್ಥೆಯಲ್ಲ. ಜೀವಾತ್ಮನೆಂದರೆ, ಜಾಗೃತ್ ಸ್ವಪ್ನ ಸುಷುಪ್ತಿಗಳಲ್ಲಿ ನಿರಂತರವಾಗಿರುವ, ಸ್ವಾತ್ಮಪ್ರಜ್ಞೆಯ ವ್ಯಕ್ತಿ. 'ನಾನು' ಎಂಬ ಸ್ವಾತ್ಮ ಪ್ರಜ್ಞೆಯಿಲ್ಲದೆ ಜೀವಾತ್ಮನಿಲ್ಲ. ಏನು ಇಲ್ಲವಾದರೂ 'ನಾನು' ಎಂಬ ಪ್ರಜ್ಞೆ ಮಾತ್ರ ಇಲ್ಲವಾಗುವುದಿಲ್ಲ. 'ನಾನು' ಎಂಬ ಪ್ರಜ್ಞೆ ಅಭ್ಯಾಸದಿಂದ ಜನ್ಯವಾದುದಲ್ಲ; ನಾನು ಎಂಬ ಪ್ರಜ್ಞೆಗೆ ಮತ್ತೊಂದು ಹೆಸರೇ 'ಸಾಕ್ಷಿ'. ಕಾಲದೇಶಗಳು ನಿಸ್ಸಂದೇಹ ತತ್ವಗಳೆಂದು ಪ್ರಮಾಣೀಕರಿಸಲ್ಪಟ್ಟಿದ್ದರೆ, ಅದಕ್ಕೆ ಪ್ರತಿಯೊಂದು ಜೀವಾತ್ಮನಲ್ಲಿಯೂ ಇರುವ ಸಾಕ್ಷಿ ಕಲ್ಪನೆಯೇ ಕಾರಣ. 'ಸಾಕ್ಷಿ' ಜೀವಾತ್ಮನಿಂದ ಬೇರ್ಪಡಿಸಲಾಗದ ಸ್ವರೂಪಾಂಶ. 'ಸಾಕ್ಷಿ' ಯ ಮೂಲಕ ಬರುವ ಜ್ಞಾನ ಎಂದೆಂದಿಗೂ ಸರಿ; ಅದು ತಪ್ಪಾಗಿರಲು ಸಾಧ್ಯವೇ ಇಲ್ಲ. ಅದು ಎಲ್ಲ ಜ್ಞಾನವನ್ನು ತೂಗಿ ನೋಡುವ, ಪ್ರಮಾಣೀಕರಿಸುವ ಅತ್ಯುತ್ತಮ ಇಂದ್ರಿಯವಾಗಿದೆ. ಅದು ಸುಖದುಃಖಗಳನ್ನು ನೇರವಾಗಿ ಪ್ರತ್ಯಕ್ಷಿಸುತ್ತದೆ. ಜೀವಾತ್ಮನಿಗೂ ಸಾಕ್ಷಿಗೂ ಅವಿನಾಸಂಬಂಧವುಂಟು. ಜ್ಞಾನ, ಕ್ರಿಯೆ, ಭೋಗ -- ಇವುಗಳು ಸ್ಥಿರವಾದ ಆತ್ಮನಲ್ಲಿ ಮಾತ್ರ ಇರಬಲ್ಲವು, ಚಿತ್ ಅಚಿತ್ ಸಂಘಾತದಲ್ಲಿ ಅಲ್ಲ. ಜೀವಾತ್ಮಗಳು ಮೂಲ ಸ್ವರೂಪದಲ್ಲಿ ಪ್ರತಿಯೊಂದೂ ಭಿನ್ನ. ಪ್ರತಿಯೊಂದೂ ವಿಶಿಷ್ಟ; ಅವನು ಅವನೇ, ಮತ್ತೊಬ್ಬನು ಮತ್ತೊಬ್ಬನೇ. ಒಬ್ಬನಿಗೆ ಅವನದೇ ಆದ ಜ್ಞಾನ ಯೋಗ್ಯತೆಗಳುಂಟು. ಜೀವಾತ್ಮ ತನ್ನ ಅಸ್ತಿತ್ವವನ್ನು ನಿರ್ಗುಣ, ನಿರ್ವಿಷಯಕ ಬ್ರಹ್ಮದಲ್ಲಿ ನೀಗಿಸಿಕೊಳ್ಳುವುದಿಲ್ಲ. ದೇಹ ಸಂಬಂಧದಿಂದ ಉಂಟಾಗಿರುವ ಸ್ವಾರ್ಥವನ್ನು ನೀಗಿಸಿಕೊಂಡು ಭಗವಂತನ ಕೈಂಕರ್ಯವನ್ನು ಮಾಡುತ್ತಿರುವವನು, ತಾನೇ, ತನ್ನದೇ ವಿಶಿಷ್ಟ ವ್ಯಕ್ತಿತ್ವ ಎಂಬ ಅರಿವು ಜೀವಾತ್ಮನಲ್ಲಿ ಸದಾ ಜಾಗೃತವಾಗಿರುತ್ತದೆ. ಆದುದರಿಂದಲೇ ಅವನು ಭಗವಂತನ ಶ್ರೇಷ್ಠತೆಯನ್ನು ಗುರುತಿಸಬಲ್ಲ. ಅವನ ಮಹಾತ್ಮೆಯನ್ನು ಕೊಂಡಾಡಬಲ್ಲ; ತನ್ನ ನಿರಂತರ ವ್ಯಕ್ತಿತ್ವವನ್ನೂ ಮುಂದುವರಿಸಿಕೊಳ್ಳಬಲ್ಲ ಎಂದು ಶ್ರೀ ಮಧ್ವರು ಪ್ರತಿಪಾದಿಸುತ್ತಾರೆ.

ಜೀವಾತ್ಮ ಶ್ರೀ ಮಧ್ವರ ಪ್ರಕಾರ, ಭಗವಂತನಿಂದ ಭಿನ್ನನಾಗಿದ್ದಾನೆ. ಭಗವಂತ ಸರ್ವಜ್ಞ, ಸರ್ವಶಕ್ತನಾದರೆ, ಜೀವಾತ್ಮ ಅಲ್ಪಜ್ಞ ನಿಸ್ಸಹಾಯಕ, ಭಗವಂತ ಬೃಹತ್, ಸರ್ವವ್ಯಾಪಿ, ವಿಭುವಾದರೆ, ಜೀವಾತ್ಮ ಪರಿಮಿತ ವ್ಯಾಪ್ತಿಯುಳ್ಳವನು, ಅಣುಸ್ವರೂಪಿ. ಭಗವಂತ ಪರಿಪೂರ್ಣನಾದರೆ, ಜೀವಾತ್ಮ ಅಪರಿಪೂರ್ಣ, ದುರ್ಬಲ. ಒಬ್ಬ ಜೀವಾತ್ಮ ಮತ್ತೊಬ್ಬ ಜೀವಾತ್ಮನಿಂದ ಸ್ವರೂಪದಲ್ಲಿ ಭಿನ್ನನಾದರೂ, ಸರ್ವೋತ್ಕೃಷ್ಟನಾದ ಭಗವಂತನ ಉದಾರದೃಷ್ಟಿಯಲ್ಲಿ ಎಲ್ಲಾ ಜೀವಾತ್ಮರೂ ಪರಸ್ಪರ ಪ್ರೀತಿ, ಸ್ನೇಹ, ವಿಶ್ವಾಸ ಸಹಕಾರಗಳಿಗೆ ಅರ್ಹರು.

ಶ್ರೀ ಮಧ್ವರ ಪ್ರಕಾರ ಜೀವಾತ್ಮನ ಬಂಧನ ಸತ್ಯ ಮಿಥ್ಯೆಯಲ್ಲ. ಜೀವಾತ್ಮನ ಬಂಧನಕ್ಕೆ ಅಜ್ಞಾನವೇ ಕಾರಣ. ಅಜ್ಞಾನದಿಂದ ಜೀವಾತ್ಮ ತನ್ನ ನೈಜ ಸ್ವರೂಪವನ್ನು ಹಾಗೂ ಭಗವಂತನ ಸ್ವರೂಪವನ್ನು ತಿಳಿಯದೆ ಬಂಧನಕ್ಕೆ ಒಳಗಾಗುತ್ತಾನೆ. ಭಗವಂತನ 'ಮಾಯಾಶಕ್ತಿ'ಯೇ ಜೀವಾತ್ಮನ ಅಜ್ಞಾನಕ್ಕೆ ಕಾರಣವೆಂದು ಶ್ರೀ ಮಧ್ವರು ಸಾರುತ್ತಾರೆ. ಹೀಗೆ ಜೀವಾತ್ಮನ ಬಂಧನಕ್ಕೆ ಭಗವಂತನೇ ನೇರ ಕಾರಣನಾದ್ದರಿಂದ, ಜೀವಾತ್ಮನ ಮುಕ್ತಿಗೂ ಭಗವಂತನೇ ಕಾರಣ ಎಂದು ಶ್ರೀ ಮಧ್ವರು ಪ್ರಬಲವಾಗಿ ಪ್ರತಿಪಾದಿಸುತ್ತಾರೆ. ಭಗವಂತನ ಪ್ರಸಾದ ಅಥವಾ ಅನುಗ್ರಹವಿಲ್ಲದೆ ಜೀವಾತ್ಮನಿಗೆ ಮೋಕ್ಷವಿಲ್ಲ ಎಂದು ಮಧ್ವದರ್ಶನ ಖಡಾಖಂಡಿತವಾಗಿ ಸಾರುತ್ತದೆ.

ಭಗವಂತನ ಮಹಾತ್ಮೆಯ ಜ್ಞಾನ ಸಾಧಕನಿಗೆ ಆಗಬೇಕು. ಅಷ್ಟೇ ಅಲ್ಲ. ಅಂತಹ ಭಗವತ್ಪ್ರೇಮ ಸದೃಢವಾಗಿ ಬೆಳೆದು ಉಳಿಯಬೇಕು. ಇಂತಹ ಭಕ್ತಿಯ ಪರಮೋಚ್ಚಸ್ಥಿತಿಯೇ ಭಕ್ತನ ಕಡೆಗೆ ನಾರಾಯಣ ಪ್ರಸಾದ ಹರಿಯಲು ಅನುವು ಮಾಡಿಕೊಡುತ್ತದೆ. ಪ್ರೇಮಮಯವಾದ ಉಪಾಸನೆಯಿಂದ ಭಗವಂತನ ಸಾಕ್ಷಾತ್ಕಾರವನ್ನು ಪಡೆಯಬಹುದು. ಪರೋಕ್ಷ ಜ್ಞಾನವನ್ನು ಅಪರೋಕ್ಷವನ್ನಾಗಿ ಮಾಡಲು ಉಪಾಸನೆ ಪ್ರಧಾನ ಸಾಧನವಾಗುತ್ತದೆ ಎಂದು ಶ್ರೀ ಮಧ್ವರು ಸಾರುತ್ತಾರೆ.

ಶ್ರೀ ಮಧ್ವಾಚಾರ್ಯರು ಸಮಾಜಕ್ಕೆ ನೀಡಿರುವ ಒಂದು ಮಹೋನ್ನತ ಕೊಡುಗೆಯೆಂದರೆ 'ಭಕ್ತಿಸಾಧ್ಯತೆ' ಮತ್ತು 'ಭಕ್ತಿ ಪ್ರಸರಣ'ಕ್ಕೆ ಅನುಗುಣವಾಗಿರುವ, ವೇದೋಪನಿಷತ್ತು ಪುರಾಣ ತಿಹಾಸಗಳ ಆಧಾರವನ್ನು, ಹೊಂದಿರುವ ತತ್ವಚಿಂತನೆಯನ್ನು ರೂಪಿಸಿ ಬೆಳಸಿರುವುದು. ಭಕ್ತಿಪಂಥದ ಅಗ್ರಗಣ್ಯರಲ್ಲಿ ಶ್ರೀ ಮಧ್ವರು ವಿಶೇಷವಾಗಿ ಹೆಸರಿಸಲ್ಪಡುತ್ತಾರೆ. ಭಕ್ತಿ ಪರವಶತೆ ಅವರ ಕೃತಿಗಳಲ್ಲಿ ಮುಪ್ಪುರಿಗೊಂಡಿದೆ ಎನ್ನಬಹುದು. ಭಕ್ತನ ಸಲುವಾಗಿ, ಭಗವಂತ ತನ್ನ ಸ್ವಾತಂತ್ರ್ಯವನ್ನು ಬದಿಗಿಟ್ಟು ಭಕ್ತನ ವಶನಾಗುತ್ತಾನೆ ಎಂದು ಶ್ರೀ ಮಧ್ವರು ತಮ್ಮ ಗೀತಾ ಭಾಷ್ಯದಲ್ಲಿ ಘೋಷಿಸುತ್ತಾರೆ. ಭಕ್ತಿ ಕೇವಲ ಭಾವಾವೇಶವಲ್ಲ; ಜ್ಞಾನದ ಒಂದು ರೂಪವೇ ಅದು.

ಶ್ರೀ ಮಧ್ವರ ಪ್ರಕಾರ, ಮೋಕ್ಷವೇ ಅಂತಿಮ ಆತ್ಮೋದ್ಧಾರಕ ಪುರುಷಾರ್ಥ. ಮೋಕ್ಷವೆಂದರೆ ಅಜ್ಞಾನದಿಂದ ಬಿಡುಗಡೆ, ಸರ್ವಕ್ಲೇಶ ಅನಿಷ್ಟಗಳಿಂದ ಬಿಡುಗಡೆ, ಜನನ ಮರಣಗಳಿಂದ ಬಿಡುಗಡೆ. ಮೋಕ್ಷಸ್ಥಿತಿಯಲ್ಲಿ ಜೀವಾತ್ಮ ಶಾಶ್ವತ ಆನಂದವನ್ನು ಹೊಂದುತ್ತಾನೆ. ಅದು ಪ್ರಜ್ಞಾನಾಶವಿಲ್ಲದೆ ಭಗವತ್ ಇಚ್ಛೆಗೆ ಒಪ್ಪಿಸಿಕೊಳ್ಳುವುದು. ಅದು ಆನಂದೋತ್ಕರ್ಷದ ಪರಮಾವಧಿ; ಸರ್ವದುಃಖ ಪರಂಪರೆಯ ನಿವೃತ್ತಿ.

ಒಟ್ಟಿನಲ್ಲಿ ವಾಸ್ತವ ದೃಷ್ಟಿ, ವೈಜ್ಞಾನಿಕ ಮನೋಭಾವ, ಧರ್ಮಪರಾಯಣತೆ, ಭಗವತ್ ಪ್ರೇಮ, ಭಕ್ತಿಪ್ರಸರಣ -- ಇವು ಮನುಕುಲಕ್ಕೆ ಶ್ರೀ ಮಧ್ವಾಚಾರ್ಯರು ನೀಡಿರುವ ಕೊಡುಗೆಯಾಗಿದೆ. 

# ಮೊಧೇರಾದ ಸೂರ್ಯದೇವಾಲಯ

---ಡಿ. ರಾಮಕೃಷ್ಣ ರಾವ್.

ಗುಜರಾತಿನ ಮೆಹಸಾನ ಜಿಲ್ಲೆಯ ಮೊಧೇರದಲ್ಲಿರುವ ಸೂರ್ಯದೇವಾಲಯ ಕರ್ನಾಟಕದ ಕಲ್ಯಾಣ ಚಾಲುಕ್ಯರ ಶೈಲಿಯಲ್ಲಿ ರಚಿತವಾಗಿದೆ ಎಂದು ಕೆಲವರ ಅಭಿಪ್ರಾಯ.

ವೇದಗಳ ಕಾಲದಿಂದಲೂ ಸೌರದೇವತೆಗಳಲ್ಲಿ 'ಆದಿತ್ಯ' ಅಥವಾ ಸೂರ್ಯನು ಪ್ರಮುಖನಾದವನು. ಋಗ್ವೇದದ ಸೂಕ್ತ ಸೂರ್ಯೋಪಾಸನೆಗೆ ಪ್ರವೃತ್ತವಾಗಿದೆಯೋ ಎಂದು ತಿಳಿಯುವಂತೆ ಈ ದೇವತೆಗೆ ಪ್ರಾಧಾನ್ಯವನ್ನು ಕೊಟ್ಟಿದೆ. ಸ್ಮೃತಿಗಳ ಕಾಲದಲ್ಲಿ ನವಗ್ರಹಗಳ ಪೂಜೆಕಾಣಿಸಿಕೊಳ್ಳುತ್ತದೆ. ಇವರಲ್ಲಿ ಸೂರ್ಯನೇ ಪ್ರಮುಖನಾದವನು. ಸೂರ್ಯಾರಾಧನೆ ಒಂದು ಕಾಲದಲ್ಲಿ ಜಗತ್ತಿನಲ್ಲೆಲ್ಲ ಹರಡಿದ್ದಿದು ತಿಳಿದುಬರುತ್ತದೆ. ಪರ್ಶಿಯಾ ಮತ್ತು ಭಾರತಗಳಲ್ಲಿ ವಿಶೇಷವಾಗಿಯೇ ಇದ್ದಿತು.

ಪ್ರಾಚೀನ ಭಾರತದಲ್ಲಿ ಸೌರಪಂಥ ಪ್ರಬಲವಾಗಿದ್ದು ಆದಿತ್ಯಗುಡಿಗಳು ಬಹಳ ಕಡೆ ಇದ್ದವು. ಕ್ರಿ.ಶ. ಆರನೇ ಶತಮಾನದಲ್ಲಿಯೇ ಸೂರ್ಯಾರಾಧನೆಯ ಕುರುಹುಗಳನ್ನು ಕಾಣಬಹುದು. ಏಳನೇ ಶತಮಾನದಲ್ಲಿದ್ದ ಹರ್ಷವರ್ಧನನಕಾಲದ ಒಂದು ತಾಮ್ರಪತ್ರದಲ್ಲಿ ಸೂರ್ಯಾರಾಧಕರಾಗಿದ್ದ ರಾಜರುಗಳ ಹೆಸರುಗಳಿವೆ. ಕಾಶ್ಮೀರದಿಂದ ದಕ್ಷಿಣದವರೆಗೂ ಸೂರ್ಯಾರಾಧನೆಯ ದೇವಾಲಯಗಳನ್ನು ಗುರುತಿಸಬಹುದು. ಎಂಟನೇ ಶತಮಾನದಲ್ಲಿದ್ದ ಲಲಿತಾದಿತ್ಯನಿಂದ ಕಟ್ಟಲ್ಪಟ್ಟ ಅತ್ಯಂತ ಸುಂದರವಾದ ಸೂರ್ಯ ದೇವಾಲಯದ ಅವಶೇಷಗಳನ್ನು ಕಾಶ್ಮೀರದ ಮಾರ್ತಾಂಡದಲ್ಲಿ ಕಾಣಬಹುದು. ಇಂದು ಜಗತ್ಪ್ರಸಿದ್ಧವಾದ ಕೋಣಾರ್ಕದ ಸೂರ್ಯಮಂದಿರ ಆ ಯುಗದ ಅವಶೇಷ. ತಂಜಾವೂರು ಜಿಲ್ಲೆಯ ತಿರುವಣಮರುಡೂರಿನಲ್ಲಿರುವ ಸೂರ್ಯನಾರ್ ಕೋಯಿಲ್ ಇನ್ನೊಂದು ನಿದರ್ಶನ. ಈ ದೇವಾಲಯವನ್ನು ಮಾರ್ತಾಂಡಾಲಯವೆಂದೂ ಕರೆಯುತ್ತಿದ್ದರು. ಕುಲೋತ್ತುಂಗ ಚೋಳರಾಜ ಕಟ್ಟಿಸಿದ ಈ ಗುಡಿಯಲ್ಲಿ ಸೂರ್ಯನೇ ಪ್ರಧಾನ ದೇವತೆ. ಕಾಲಕ್ರಮೇಣ ಸೂರ್ಯಾರಾಧನೆ ಕಾಶ್ಮೀರದಿಂದ ಪಂಜಾಬಿನ ಮುಖಾಂತರವಾಗಿ ಗುಜರಾತಿಗೆ ಹರಡಿತು. ಮುಲ್ತಾನದಲ್ಲಿದ್ದ ಪ್ರಸಿದ್ಧ ದೇವಾಲಯವು ಈಗ ನೆಲಸಮವಾಗಿದೆ.

ಗುಜರಾತಿನ ಸೋಲಂಕಿ ವಂಶದ ಭೀಮರಾಜ ಕ್ರಿ.ಶ. ೧೦೨೬ ರಲ್ಲಿ ಮೊಧೇರ ಎಂಬ ಸ್ಥಳದಲ್ಲಿ ಬೃಹದಾಕಾರದ ಸೂರ್ಯದೇವಾಲಯವನ್ನು ನಿರ್ಮಿಸಿದನು. ಘಜ್ನಿ ಮಹಮೂದನ ದಾಳಿಗೆ ನಷ್ಟವಾಗಿ ಹೋಗಿದೆಯಾದರೂ ದೇಗುಲದ ಭವ್ಯತೆಯನ್ನು ಸಾರಿ ಹೇಳುವಷ್ಟು ಅವಶೇಷಗಳು ಇನ್ನೂ ಉಳಿದಿವೆ.

ಗುಜರಾತಿನ ಅಹಮದಾಬಾದಿನಿಂದ ಉತ್ತರದಲ್ಲಿ ೧೦೨ ಕಿ.ಮಿ. ದೂರದಲ್ಲಿರುವ ಮೊಧೇರ ನಗರವು ಸೋಲಂಕಿ ರಾಜರ ರಾಜಧಾನಿಯಾಗಿದ್ದ ಪೈಠಣದ ಸಮೀಪದಲ್ಲಿರುವ ಒಂದು ಹಳ್ಳಿ. ಒಂದಾನೊಂದು ಕಾಲದಲ್ಲಿ ಅತ್ಯಂತ ವೈಭವಪೂರಿತವಾಗಿ ಮೆರೆಯುತ್ತಿದ್ದ ಪಟ್ಟಣವಾಗಿತ್ತು. ಇಲ್ಲಿನ ಭವ್ಯ ಸೂರ್ಯದೇವಾಲಯ ಮಾರ್ತಾಂಡ ಮತ್ತು ಕೋನಾರ್ಕದೇವಾಲಯಗಳಂತೆ ಅವನತಿ ಹೊಂದಿ ಈಗ ಪಾಳುದೇಗುಲವಾಗಿ ಉಳಿದಿದೆ. ಆದರೂ ಈ ಅವಶೇಷಗಳಲ್ಲಿ ಕಾಣಬರುವ ಕೆತ್ತನೆಗಳಲ್ಲಿರುವ ಕೌಶಲ ವಿಗ್ರಹಗಳ ರೂಪರಚನೆ ಪ್ರಮಾಣ ಮುಂತಾದವು ಅಂದಿನ ಸುಂದರ ಕಲಾಕೃತಿಯ ಸ್ಮಾರಕವಾಗಿವೆ.

ಅಂದಿನ ವೈಭವ ಚಿತ್ರಿಸಿಕೊಳ್ಳಲು ಈಗ ಉಳಿದಿರುವ ಭಾಗಗಳನ್ನೇ ನೋಡಿದರೆ ಸಾಕು. ನಕ್ಷತ್ರಾಕಾರದ ಪಾಯದಮೇಲೆ ಮರಳು ಕಲ್ಲಿನಿಂದ ನಿರ್ಮಿತವಾಗಿರುವ ಮುಖದ್ವಾರ, ಮುಖ ಮಂಟಪ, ಸಭಾ ಮಂಟಪ ಮತ್ತು ಗರ್ಭಗೃಹಗಳು ಇಂದಿಗೂ ಸುಂದರವಾಗಿವೆ. ಹೊರಾಂಗಣದ ಗೋಡೆಗಳ ಮೇಲೆ ಆನೆ, ಕುದುರೆ, ರಥ ಮೊದಲಾದ ಪ್ರಾಣಿಗಳ ಮತ್ತು ವಾಹನಗಳ ಅಲಂಕಾರ ಚಿತ್ರ ಪಟ್ಟಿಗಳನ್ನು ಕಾಣಬಹುದು. ಮೇಲ್ಭಾಗದ ಗೂಡುಗಳಲ್ಲಿ ವಿಷ್ಣು, ಶಿವ, ಸೂರ್ಯ, ಚಂದ್ರ ಮೊದಲಾದ ಅಸಂಖ್ಯಾತ ಶಿಲ್ಪಗಳಿವೆ. ಸೂಕ್ಷ್ಮವಿವರಗಳನ್ನುಳ್ಳ ಈ ಮುಖ್ಯ ಆಕೃತಿಗಳು ನಾಲ್ಕೈದು ಅಡಿ ಎತ್ತರವಿದ್ದು ಅವುಗಳ ನಡುವಣ ಜಾಗಗಳನ್ನು ಎರಡು ಪಟ್ಟಿಗಳಾಗಿ ಹಂಚಿ, ಇತರ ಚಿಕ್ಕ ಆಕೃತಿಗಳಿಂದ ತುಂಬಿಸಲಾಗಿದೆ. ಇಲ್ಲಿ ಆರಿಸಿಕೊಂಡ ಅಲಂಕಾರಿಕ ವಿಗ್ರಹಗಳು ವಿವಿದ ದೇವತೆಗಳು ಮತ್ತು ಸುರಸುಂದರಿಯರು. ಹಾಗೆಯೇ ಇನ್ನೆಷ್ಟೋ ಕಾಲ್ಪನಿಕ ಮತ್ತು ವಾಸ್ತವಿಕ ವ್ಯಕ್ತಿಗಳು ಅಲ್ಲಿವೆ. ಸೂಕ್ಷ್ಮ ಶಿಲ್ಪದ ಪರಾಕಾಷ್ಠೆಯನ್ನು ದೇವಾಲಯದ ಮುಖದ್ವಾರ ಮತ್ತು ಮುಖಮಂಟಪಗಳಲ್ಲಿ ಇಂದಿಗೂ ಕಾಣಬಹುದು. ದೇವಾಲಯದ ಗೋಪುರ ಈಗ ಸಂಪೂರ್ಣವಾಗಿ ನಾಶವಾಗಿದೆ. ಗರ್ಭಗುಡಿಯಲ್ಲಿದ್ದ ಸೂರ್ಯನ ವಿಗ್ರಹವೂ ಈಗ ಇಲ್ಲ.

ಮೊಧೇರ ದೇವಾಲಯದ ಶಿಲ್ಪಶೈಲಿಯನ್ನು ಶಾಸ್ತ್ರಜ್ಞರು ಚಾಲುಕ್ಯ ಶೈಲಿ ಎಂದು ಕರೆದಿದ್ದಾರೆ. ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಕೆಲವು ಶಿಲ್ಪಿಗಳು ಅಲ್ಲಿಗೆ ವಲಸೆ ಹೋಗಿದ್ದು ಅವರು ಈ ದೇವಾಲಯ ರಚಿಸಿರಬಹುದೆಂದು ಕೆಲವರ ಊಹೆ. ಆದರೂ ಇಲ್ಲಿನ ಶಿಲ್ಪ ಚಾಲುಕ್ಯ ವಾಸ್ತುಶಿಲ್ಪಕ್ಕಿಂತ ಭಿನ್ನವಾಗಿರುವಂತೆ ತೋರುತ್ತದೆ. ಈ ಶಿಲ್ಪ ಕೃತಿಗಳು ರಜಪುತಾನದ ಅನ್ಯವಾಸ್ತು ಶಿಲ್ಪಗಳೊಡನೆ ಸೇರಿ ನಿರ್ಮಾಣವಾದಂತೆ ಕಾಣುವುದು.

ದೇವಾಲಯದ ಮುಂಬಾಗದಲ್ಲಿ ಸುಂದರ ದೇವಮಂದಿರಗಳಿಂದ ಮತ್ತು ಮಂಟಪಗಳಿಂದ ಕೂಡಿದ ಸೊಗಸಾದ ಸೋಪಾನಗಳನ್ನುಳ್ಳ ಕಲ್ಯಾಣಿ ಇದೆ. "ರಾಮಕುಂಡ" ಅಥವಾ "ಸೂರ್ಯಕುಂಡ" ಎಂದು ಕರೆಯಲ್ಪಡುವ ಈ ಕಲ್ಯಾಣಿಯು ನೀರಿನಿಂದ ತುಂಬಿರುವಾಗ ನೋಡಲು ತುಂಬಾ ಮನೋಹರ.

ಪುರಾಣಗಳಲ್ಲಿ ಈ ಪ್ರದೇಶವು ಧರ್ಮಾರಣ್ಯವೆಂದೂ, ಮಹೇರುಕಪುರವೆಂದೂ ಪ್ರಸಿದ್ಧಿ ಹೊಂದಿ ಋಷಿವರೇಣ್ಯರಿಂದಲೂ, ಮುನಿ ಪುಂಗವರಿಂದಲೂ ಪುನೀತವಾಗಿದ್ದಿತೆಂದು ವರ್ಣಿಸಲಾಗಿದೆ. ಚಾರಿತ್ರಕವಾಗಿಯೂ ಸಹ ಮೊಧೇರ ಒಂದು ಪ್ರಬಲವಾದ ಪಟ್ಟಣವಾಗಿದ್ದಿತೆಂದು ಪ್ರಸಿದ್ಧಿ. ಹತ್ತಾರು ನಗರಗಳು ಸುತ್ತಲೂ ಬೆಳೆದು ಕಾಲಕ್ರಮೇಣ ಅವಸಾನ ಹೊಂದಿರಬಹುದೆಂದು ಕೆಲವರ ಅಭಿಪ್ರಾಯ.

ಮೊಧೇರ ಗುಜರಾತಿನ ಮೆಹಸಾನ ಜಿಲ್ಲೆಯ ಚಾನಾಸ್ತ ತಾಲ್ಲೂಕಿನಲ್ಲಿದೆ. "ಮೋಧೇರರೋಡ್" ರೈಲು ನಿಲ್ದಾಣದಿಂದ ಪೂರ್ವಕ್ಕೆ ಹತ್ತು ಕಿ.ಮಿ. ದೂರದಲ್ಲಿದೆ. ಅಹಮ್ಮದಾಬಾದಿನಿಂದ ಮೊಧೇರ ದೇವಾಲಯದವರೆಗೂ ಸೊಗಸಾದ ರಸ್ತೆ ಇದ್ದು ಅನುಕೂಲವಾದ ಸಾರಿಗೆ ಸೌಕರ್ಯಗಳು ಇವೆ. (ಸಂಗ್ರಹ)



# ಸರ್ವಭೂತದಯೆ

---ಕೋಲಾರ್ ಕೃಷ್ಣಯ್ಯರ್.

ಭಗವದ್ಗೀತೆಯಲ್ಲಿ ಕಂಡುಬರುವ ಅನೇಕ ಪ್ರಧಾನ ವಿಷಯಗಳಲ್ಲಿ ಮುಖ್ಯವಾಗಿ ಗಮನಿಸದೇ ಕಾದ ವಿಷಯಗಳು ಎರಡು. ಅವುಗಳು ಸರ್ವಭೂತದಯೆ ಮತ್ತು ಸಮತ್ವ.

ಚಿತ್ತವು ರಜೋಗುಣ ತಮೋಗುಣಾತ್ಮಕವಾಗಿ ಕಠಿನವಾಗಿರುವವರೆಗೂ ಮೇಲೆ ಮೇಲೆ ಎಷ್ಟು ಪೂಜೆಗಳ ಮಾಡಿದರೂ, ಎಷ್ಟು ಸ್ತೋತ್ರಗಳು ಪಠಿಸಿದರೂ,ಎಷ್ಟು ಧ್ಯಾನ ಮಾಡಿದರೂ ಮೋಕ್ಷ ಲಭಿಸುವುದಿಲ್ಲ. ಪರಪ್ರಾಣಿಗಳ ಮೇಲೆ ದಯೆ, ಕರುಣೆ ವರ್ಷಿಸಿದರೆ ಮಾತ್ರ ಯೋಗ, ಭಕ್ತಿ, ಧ್ಯಾನ, ಜ್ಞಾನ ಮೊದಲಾದವುಗಳು ಅಭಿವೃದ್ಧಿ ಹೊಂದಲು ಸಾಧ್ಯವಾಗುತ್ತದೆ. ಭಗವಂತನ ಮೇಲೆ ಭಕ್ತಿ ಇದ್ದು ಜೀವರಾಶಿಗಳ ಮೇಲೆ ದ್ವೇಷವಿದ್ದರೆ ಆ ಭಕ್ತಿಗೆ ಅರ್ಥವೇ ಇಲ್ಲ. ಇದು ಭಗವಂತನಿಗೆ ಮಾಡುವ ಉಪಚಾರವಲ್ಲದೆ ಅಪಚಾರವೆ ಆಗುತ್ತದೆ.

ಸರ್ವ ಜೀವ ತಿರಸ್ಕಾರಃ
ಕೇಶವಂ ಪ್ರತಿಗಚ್ಛತಿ

ಯಾವ ಜೀವಿಯನ್ನು ತಿರಸ್ಕರಿಸಿದರೂ ಬಾಧಿಸಿದರೂ, ಭಗವಂತನನ್ನು ಬಾಧಿಸದಂತೆಯೇ ಆಗುವುದು. ಏಕೆಂದರೆ ಸಮಸ್ತ ಜೀವಕೋಟಿಗಳು ವಿರಾಡ್ರೂಪನಾದ ಪರಮಾತ್ಮನ ಅವಯವಗಳು. ಯಾವ ಒಂದು ಅವಯವವನ್ನು ಬಾಧಿಸಿದರೂ, ಪರಮಾತ್ಮನಿಗೆ ಅದು ಸಂಭವಿಸುತ್ತದೆ. ಸರ್ವಭೂತದಯೆ ಎನ್ನುವುದು ಯೋಗಗಳೆಲ್ಲಕ್ಕು ಪರಮಾವಶ್ಯಕವಾದ ಅಂಗ. ಈ ಸತ್ಯವನ್ನೇ ಭಗವದ್ಗೀತೆ ಪ್ರಾರಂಭದಿಂದ ಕೊನೆವರೆಗೂ ಪದೇ ಪದೇ ಉದ್ಘಾಟಿಸುತ್ತಲಿದೆ. ಸಮಯಬಂದಾಗೆಲ್ಲಾ ಜೀವಕಾರುಣ್ಯವನ್ನು ಭಗವಂತನು ಒತ್ತಿ ಹೇಳುತ್ತಿದ್ದನು.

ಅದ್ವೇಷ್ಟಾ ಸರ್ವಭೂತಾನಾಂ
ಸರ್ವಭೂತ ಹಿತೇ ಗತಾಃ
ನಿರ್ವೈರಸ್ಸರ್ವ ಭೂತೇಷು

ಎನ್ನುವ ವಿಶ್ವಪ್ರೇಮ ಸೂಚಕ ವಾಕ್ಯಗಳು ಗೀತೆಯಲ್ಲಿ ಕಾಣಬರುತ್ತವೆ.

ಮಾನವಕೋಟಿಯನ್ನೇ ಅಲ್ಲದೆ ಸಮಸ್ತ ಜೀವಕೋಟಿಯನ್ನು ಪ್ರೇಮಿಸಬೇಕು. ಏಕೆಂದರೆ 'ಸರ್ವಭೂತ'ವೆಂದು ಹೇಳಲಾಗಿರುವುದರಿಂದ. ಔಷದವನ್ನು ಸ್ವೀಕರಿಸಿ ಪಥ್ಯವನ್ನು ಆಚರಿಸದೆ ಇದ್ದರೆ ವ್ಯಾಧಿ ಹೇಗೆ ಗುಣವಾಗುವುದಿಲ್ಲವೊ ಹಾಗೆಯೆ ಭಗವಂತನನ್ನು ಪೂಜಿಸಿ, ಭಗವತ್ಸ್ವರೂಪಗಳಾದ ಜೀವಕೋಟಿಯನ್ನು ದ್ವೇಷಿಸಿದರೆ ಭವ ರೋಗವು ಗುಣವಾಗುವುದಿಲ್ಲ.

ಮತ್ಕರ್ಮ ಕೃನನ್ಮತ್ಪರಮೋ
ಮದ್ಭಕ್ತಸ್ಸಂಗವರ್ಜಿತ
ನಿತ್ಯೈಸ್ಸರ್ವ ಭೂತೇಷು
ಯಸ್ಸ ಮಾಮೇತಿ ಪಾಂಡವ

ಯಾರು ದೈವಕಾರ್ಯಗಳು, ದೈವಧ್ಯಾನ, ದೈವಭಕ್ತಿ, ದೈವಜ್ಞಾನಗಳ ಸಹಿತ ಸಮಸ್ತ ಪ್ರಾಣಿಗಳ ಯೊಡನೆ ದಯೆ ಗೂಡಿರುವನೊ ಅವನು ನನ್ನನ್ನು ಹೊಂದುತ್ತಾನೆ.

ಭಕ್ತನ ಗುಣಗಳನ್ನು ಪ್ರಸ್ತಾವಿಸುತ್ತಾ 'ಅದ್ವೇಷ್ಟಾ ಸರ್ವ ಭೂತಾನಾಂ' ಅಂದರೆ ಸಮಸ್ತ ಪ್ರಾಣಿಕೋಟಿಗಳಲ್ಲಿ ದ್ವೇಷವಿಲ್ಲದಿರುವಿಕೆ ಎನ್ನುವ ಸುಗುಣವನ್ನು ಹೇಳಿದಾನೆ ಭಗವಂತನು.

ಭಾಗವತದಲ್ಲಿ ಸುದಾಮ ಶ್ರೀಕೃಷ್ಣ ಪರಮಾತ್ಮನನ್ನುಮೂರು ವಿಷಯಗಳನ್ನು ಅರ್ಥಿಸಿದನು. ಅವುಗಳು--

೧. ನಿನ್ನ ಪಾದಕಮಲ ಸೇವೆ.
೨. ನಿನ್ನ ಪಾದಾರ್ಚಕರಲ್ಲಿ ಸ್ನೇಹ.
೩. ನಿತಾಂತಾ ಪಾರ ಭೂತದಯೆ.

ಆದ್ದರಿಂದ ನಮ್ಮ ನಿತ್ಯ ಜೀವಿತದಲ್ಲಿ ಭೂತದಯೆಗೆ ಅತಿ ಪ್ರಮುಖಸ್ಥಾನವನ್ನು ಕೊಡಬೇಕು.

ಸಮತ್ವವನ್ನು ಕುರಿತು ವಿಚಾರಿಸೋಣ.

ವಿಶ್ವವೆಲ್ಲವೂ ಒಂದು ಭಗವತ್ಸ್ವರೂಪ. ಭಿನ್ನತ್ವವಿಲ್ಲ. ಅಜ್ಞಾನದಿಂದಲೆ ಅನೇಕತ್ವ ಗೋಚರಿಸುತ್ತದೆ. ಎಲ್ಲವೂ ಒಂದೇ ವಿರಾಡ್ರೂಪ. ವಿಭಕ್ತಿ ಮಾಡಲು ಸಾಧ್ಯವಾಗದ ಒಂದೇ ದೈವ ತತ್ತ್ವ ಈ ಪ್ರಪಂಚದಲ್ಲಿರುವುದು. ಆದ್ದರಿಂದ ಚರಾಚರ ಪ್ರಾಣಿಗಳಲ್ಲಿ ಯಾರ ಮೇಲು ದ್ವೇಷವಿರಬಾರದು. ಎಲ್ಲರಲ್ಲಿ ಸಮಭಾವನೆ ಪ್ರದರ್ಶಿಸಬೇಕು ಎಂದು ಗೀತೆ ಪ್ರಕಟಿಸುತ್ತಿದೆ.

ಶತ್ರು ಮಿತ್ರಾದಿಗಳಲ್ಲಿಯು ಸಮಭಾವನೆ ಪ್ರದರ್ಶಿಸಬೇಕು. ಬ್ರಾಹ್ಮಣನಲ್ಲಿಯೂ, ಗೋವುಗಳಲ್ಲಿಯು, ಆನೆಯಲ್ಲಿಯು, ನಾಯಿಯಲ್ಲಿಯು, ಚಂಡಾಲನಲ್ಲಿಯು, ಸಮದೃಷ್ಟಿ ವರ್ತಿಸಬೇಕು.

ವಿದ್ಯಾವಿನಯಸಂಪನ್ನೇ
ಬ್ರಾಹ್ಮಣೇ ಗವಿ ಹಸ್ತಿನಿ
ಶುನಿ ಚೈವ ಶ್ವ ಪಾಕೇ ಚ
ಪಣ್ಡಿತಾಃ ಸಮದರ್ಶಿನಃ (೫-೧೮)

ಆತ್ಮೌಪಮ್ಯೇವ ಸರ್ವತ್ರ
ಸಮಂ ಪಶ್ಯತಿ ಯೋಽರ್ಜುನ
ಸುಖಂ ವಾ ಯದಿ ವಾ ದುಃಖಂ
ಯೋಗಿನಾಂ ಪರಮೋಃ ಮತಃ (೬-೩೨)

ಓ ಅರ್ಜುನಾ! ಸಮಸ್ತ ಪ್ರಾಣಿಗಳಲ್ಲು ಸುಖವನ್ನಾಗಲಿ, ದುಃಖವನ್ನಾಗಲಿ ತನ್ನೊಂದಿಗೆ ಹೋಲಿಸಿಕೊಳ್ಳುತ್ತಾ, ತನ್ನ ಹಾಗೆ ಸಮಾನವಾಗಿ ಯಾರು ನೋಡುತ್ತಾನೋ ಅಂತಹ ಯೋಗಿ ಶ್ರೇಷ್ಠನೆಂದು ತಿಳಿಯುತ್ತಾನೆ.

ಸುಹೃನ್ಮಿತ್ರಾರ್ಯುದಾಸೀನ
ಮಧ್ಯಸ್ಥ ದ್ವೇಷ್ಯ ಬನ್ಧುಷು
ಸಾಧುಷ್ವಪಿ ಚ ಪಾಪೇಷು
ಸಮ ಬುದ್ಧಿ ರ್ವಿಶಿಷ್ಯತೇ (೬-೯)

ಪ್ರತ್ಯುಪಕಾರವನ್ನು ಕೋರದೆ, ಒಳ್ಳೆದು ಮಾಡುವವರಲ್ಲಿ, ಪ್ರತಿಫಲವನ್ನು ಕೋರಿ ಒಳ್ಳೇದ ಮಾಡುವವರಲ್ಲಿ, ಶತ್ರುಗಳಲ್ಲಿ, ತಟಸ್ಥರಲ್ಲಿ, ಮಧ್ಯವರ್ತಿರಲ್ಲಿ, ದ್ವೇಷಿಸಲಾಗುವವರಲ್ಲಿ, ಬಂಧುಗಳಲ್ಲಿ, ಸಜ್ಜನರಲ್ಲಿ, ಪಾಪಿಗಳಲ್ಲಿ. ಸಮಭಾವನೆ ಇರುವವರೇ ಶ್ರೇಷ್ಠರು.

ಗೀತೆಯಲ್ಲಿ ಹೇಳಿರುವ ಸರ್ವಭೂತದಯೆ ಮತ್ತು ಸಮತ್ವ ಈ ಎರಡು ಸುಗುಣಗಳನ್ನು ನಮ್ಮಗಳ ನಿತ್ಯಜೀವಿತದಲ್ಲಿ ಆದಷ್ಟು ಮಟ್ಟಿಗೆ ಆಚರಣೆಯಲ್ಲಿಟ್ಟು ಕೃತಾರ್ಥರಾಗಬೇಕು.



# ಕಾಮಾಸಿಕಾಷ್ಟಕ

---ಕೆ. ಎಸ್. ಶ್ರೀವತ್ಸ

ಶ್ರೀ ಮನ್ನಿಗಮಾಂತ ಮಹಾದೇಶಿಕರು ಸ್ತೋತ್ರಗಳನ್ನು ರಚಿಸುವುದರಲ್ಲಿ ಸಿದ್ಧಹಸ್ತರು. ಹೆಚ್ಚು ಕಡಿಮೆ ಎಲ್ಲಾ ದಿವ್ಯದೇಶಗಳ ಅರ್ಚಾಮೂರ್ತಿಗಳ ವೈಭವವನ್ನು ಕುರಿತು ಸ್ತೋತ್ರಗಳನ್ನು ಹಾಡಿದ್ದಾರೆ. ಕೆಲವನ್ನು ದೀರ್ಘವಾಗಿಯೂ, ಕೆಲವನ್ನು ಚಿಕ್ಕದಾಗಿಯೂ ರಚಿಸಿದ್ದಾರೆ. ಅಂತಹ ಚಿಕ್ಕ ಸ್ತೋತ್ರಗಳಲ್ಲಿ ಕಾಮಾಸಿಕಾಷ್ಟಕವೂ ಒಂದು. ಎಂಟು ಪದ್ಯಗಳಲ್ಲಿ ಕಾಂಚಿಪುರದ ಸಮೀಪದಲ್ಲಿ ಇರುವ ನರಸಿಂಹನನ್ನು ಸ್ತುತಿಸಿದ್ದಾರೆ.

ಶ್ರುತೀನಾಂ ಉತ್ತರಂ ಭಾಗಂ
ವೇಗವತ್ಯಾಶ್ಚ ದಕ್ಷಿಣಾಂ
ಕಾಮಾದಧಿವಸನ್ ಜೀಯಾತ್
ಕಶ್ಚಿದ್ ಅದ್ಭುತ ಕೇಸರಿ

"ವೇದಗಳ ಉತ್ತರ ಭಾಗದಲ್ಲೂ, ಹಾಗೂ ವೇಗವತಿ ನದಿಯ ದಕ್ಷಿಣ ಭಾಗದಲ್ಲೂ ವಿರಾಜಿಸುತ್ತಿರುವ, ಸ್ವೇಚ್ಛೆಯಾದ ಲೀಲಾಪ್ರವೃತ್ತಿಯುಳ್ಳ ಅದ್ಭುತ ಕೇಸರಿಯಾದ ನರಸಿಂಹನು ಯಾವಾಗಲೂ ಜಯಶೀಲನಾಗಿರಲಿ".

ಈ ಸ್ತೋತ್ರವನ್ನು ಸ್ವಾಮಿ ತಿರುಮಂಗೈಯಾಳ್ವಾರ್ ಅವರು 'ವೇಳುಕ್ಕೈ' ಎಂದು ಕರೆದಿರುವ ದಿವ್ಯದೇಶದಲ್ಲಿ ಆರಾಧಿಸಲ್ಪಡುವ ನರಸಿಂಹನ ಮೇಲೆ ರಚಿಸಲಾಗಿದೆ. ಸ್ವಾಮಿ ದೇಶಿಕರು ವೇಳುಕ್ಕೈ ಎಂಬ ತಮಿಳು ಪದಕ್ಕೆ ಸಂಸ್ಕೃತದಲ್ಲಿ 'ಕಾಮಾಸಿಕ' ಎಂದು ತರ್ಜುಮೆ ಮಾಡಿದ್ದಾರೆ. ಸ್ತೋತ್ರವನ್ನು ಪರಮಾತ್ಮನ ಮಂಗಳಾಶಾಸನ ಮಾಡುವುದರ ಮೂಲಕ ಪ್ರಾರಂಭಿಸಿದ್ದಾರೆ. ಪೆರಿಯಾಳ್ವಾರರು ಪಲ್ಲಾಂಡು ಹಾಕಿದಂತೆ 'ಜೀಯಾತ್' ಎಂಬ ಪದ ಪ್ರಯೋಗಿಸಿದ್ದಾರೆ. ಜೀಯಾತ್ ಎಂದರೆ ಜಯಶೀಲನಾಗಲಿ ಎಂದರ್ಥ. ಜಯ ಶಬ್ದ ಯಾವಾಗಲೂ ಮಂಗಳ ಸೂಚಕವಾದದ್ದು. ಶ್ರುತಿಗಳ ಉತ್ತರ ಭಾಗವೆಂದರೆ ಉಪನಿಷತ್ತುಗಳು. ಪರಮಾತ್ಮನು ಉಪನಿಷತ್ ಪ್ರತಿಪಾದ್ಯನಾದ್ದರಿಂದ ವೇದಗಳ ಉತ್ತರ ಭಾಗದಲ್ಲಿ ಪ್ರಕಾಶಿಸಲ್ಪಡುತ್ತಿದ್ದಾನೆ ಎಂಬ ಭಾವ. ಉತ್ತರ ಭಾಗವನ್ನು ಶಿರಸ್ಸು ಎಂದೂ ಕರೆಯಬಹುದು. 'ಶ್ರುತಿ ಶಿರಸಿ ವಿದೀಪ್ತೇ' ಎಂಬುದಾಗಿ ಶ್ರೀಭಾಷ್ಯ ಮಂಗಳ ಶ್ಲೋಕದಲ್ಲಿ ಆಚಾರ್ಯ ರಾಮಾನುಜರು ಹೇಳಿದ್ದಾರೆ. ಪರಮಾತ್ಮನು ಸ್ವೇಚ್ಛಾಲೀಲೆಯುಳ್ಳವನಾದ್ದರಿಂದ, ಶ್ರುತಿಗಳ ಉತ್ತರ ಭಾಗದಲ್ಲಿ ಇರುವ ಹಾಗೆಯೇ ವೇಗವತಿ ನದಿಯ ದಕ್ಷಿಣ ಭಾಗದಲ್ಲೂ ಸಹ ವಿರಾಜಿಸಿದ್ದಾನೆ ಎಂದು ಹೇಳಿ ಕ್ಷೇತ್ರ ಮಹಿಮೆಯನ್ನು ಕೊಂಡಾಡಿದ್ದಾರೆ. ವೇಗವತಿ ನದಿಯು ಈಗ ಕಂಚಿಯ ಸಮೀಪದಲ್ಲಿ ಗುಪ್ತಗಾಮಿನಿಯಾಗಿ ಹರಿಯುತ್ತಿದ್ದಾಳೆಂದು ಪ್ರತೀತಿ. ಅಲ್ಲಿ ಬಿಜಯ ಮಾಡಿಸಿರುವ ನರಸಿಂಹನು ಸಾಧಾರಣ ಕೇಸರಿಯಲ್ಲ, ಅದ್ಭುತ ಕೇಸರಿ. ಶ್ರೀಮದ್ಭಾಗವತದಲ್ಲಿ ನೃಸಿಂಹಾವತಾರ ವರ್ಣನಾ ಸಮಯದಲ್ಲಿ 'ಅದೃಶ್ಯತಾದ್ ಅದ್ಭುತ ರೂಪವರ್ಣಂ ಸ್ತಂಭೇ ಸಭಾಯಾಂ ನಮೃಗಂ ನಮಾನುಷಂ' ಎಂದು ಹೇಳಿರುವುದನ್ನು ಸ್ಮರಿಸಿ, ಆಚಾರ್ಯರು ಅದ್ಭುತ ಪದ ಪ್ರಯೋಗ ಮಾಡಿದ್ದಾರೆ. ಮೇಲೆ ಹೇಳಿದಂತೆ 'ವೇಳ್ ಇರುಕ್ಕೈ' ಎಂಬ ತಮಿಳು ಪದವನ್ನು 'ಕಾಮಾದ್ ಅಧಿವಸನ್' ಎಂದು ಕರೆದಿದ್ದಾರೆ.

ತಪನೇದ್ವಗ್ನಿನಯನಃ
ತಾಪನಾಪಚಿನೋತುನಃ
ತಾಪನೀಯ ರಹಸ್ಯಾನಾಂ
ಸಾರಃ ಕಾಮಾಸಿಕಾಹರಿಃ

ನೃಸಿಂಹ ತಾಪನೀಯ ಉಪನಿಷತ್ತಿನ ಸಾರಭೂತಾರ್ಥನಾದ, ಸೂರ್ಯ, ಚಂದ್ರ ಮತ್ತು ಅಗ್ನಿ ಇವರುಗಳನ್ನು ಮೂರು ಕಣ್ಣುಳ್ಳವನಾಗಿ ಹೊಂದಿರುವ ಕಾಮಾಸಿಕ ಹರಿಯು ನಮ್ಮ ತಾಪಗಳನ್ನು ನೀಗಲಿ.

ನರಸಿಂಹ ದೇವರ ಮಹಿಮೆಯನ್ನು ನೃಸಿಂಹ ತಾಪನೀಯ ಉಪನಿಷತ್ತಿನಲ್ಲಿ ದೀರ್ಘವಾಗಿ ವಿವರಿಸಲಾಗಿದೆ. ಆ ಉಪನಿಷತ್ತಿನ ಸಾರಭೂತಾರ್ಥನಾದ ನರಸಿಂಹನನ್ನು ಇಲ್ಲಿ ಸ್ಮರಿಸಿದ್ದಾರೆ. ನರಸಿಂಹನಿಗೆ ಮುಕ್ಕಣ್ಣ ಎಂದು ವರ್ಣಿಸಿ, ಸೂರ್ಯ, ಚಂದ್ರ ಮತ್ತು ಅಗ್ನಿ ಇವರುಗಳೇ ಕಣ್ಣುಗಳು ಎಂದು ಹೇಳಿದ್ದಾರೆ. ತಾಪವನ್ನು ಉತ್ಪತ್ತಿ ಮಾಡುವ ಸೂರ್ಯ ಮತ್ತು ಅಗ್ನಿ ಇವರನ್ನು ಕಣ್ಣುಗಳನ್ನಾಗಿ ಹೊಂದಿರುವ ನರಸಿಂಹನು ನಮ್ಮ ತಾಪಗಳನ್ನು ನಿವಾರಿಸಲು ಶಕ್ತನೇ ಸರಿ ಎಂಬುದಾಗಿ ರಸೋಕ್ತಿ.

ಆಕಂಠ ಮಾದಿ ಪುರುಷಂ
ಕಂಠೀರವಮುಪರಿ ಕುಂಠಿತಾರಾತಿಮ್
ವೇಗೋಪ ಕಂಠ ಸಂಘಾತ್ ವಿಮುಕ್ತ
ವೈಕುಂಠ ಬಹು ಮತಿ ಉಪಾಸೆ

ಆದಿ ಪುರುಷನಾಗಿರುವ ಕಂಠದವರೆಗೂ ನರನಾಗಿಯೂ ಅನಂತರ ಸಿಂಹನಾಗಿಯೂ ಇರುವ, ಅರಿಮರ್ದನನಾದವನೂ, ಯಾವ ಪರತತ್ವವು ವೈಕುಂಠವನ್ನು ತೊರೆದು ವೇಗವತಿ ಸಮೀಪದಲ್ಲಿ ಬಂದು ನೆಲೆಸಿದನೋ ಆ ನೃಸಿಂಹನನ್ನು ನಾನು ಧ್ಯಾನಿಸುತ್ತೇನೆ.

ಮೊದಲನೆಯ ಶ್ಲೋಕದಲ್ಲಿ ಕೇವಲ ಸಿಂಹವೆಂದು ವರ್ಣಿಸಿದ ಕಾಮಾಸಿಕ ಹರಿಯನ್ನು ಇಲ್ಲಿ ನರಸಿಂಹನೆಂದು ಕರೆದಿದ್ದಾರೆ. ಆದಿ ಪುರುಷನೆಂದು ಸಂಬೋಧಿಸಿದ್ದಾರೆ. ಇದರಿಂದ ಪುರುಷೋತ್ತಮತ್ವವು ವ್ಯಕ್ತವಾಗುತ್ತದೆ. ನರಸಿಂಹಾವತಾರವು ಮುಖ್ಯವಾಗಿ ಅರಿಮರ್ದನಕ್ಕಾಗಿ ಮಾಡಿದ ಅವತಾರ. ಪರಮಾತ್ಮನಿಗೆ ಯಾರೂ ಶತ್ರುಗಳಿಲ್ಲ. ಅವನ ಭಕ್ತರ ಶತ್ರುಗಳೇ ಅವನ ಶತ್ರುಗಳು. ಇಂತಹ ಅರಿಕೇಸರಿಯು ತನಗೆ ಯಾವತ್ತೂ ಪ್ರಿಯನಾದ ವೈಕುಂಠವನ್ನು ಬಿಟ್ಟು, ತನ್ನ ಭಕ್ತರಿಗೆಲ್ಲಾ ಸುಲಭ ದರ್ಶನ ಕೊಡುವುದಕ್ಕಾಗಿ ವೇಗವತಿ ನದಿಯ ಸಮೀಪ ನೆಲೆಸಿದ್ದಾನೆ. ಇದರಿಂದ ಪರಮಾತ್ಮನ ಭಕ್ತವಾತ್ಸಲ್ಯವು ತೋರ್ಪಡುತ್ತದೆ. ಪರಾಶರ ಭಟ್ಟರು ಶ್ರೀ ಗುಣರತ್ನಕೋಶದಲ್ಲಿಯೂ ಸಹ ಮಾತೆಯನ್ನು (ಲಕ್ಷ್ಮಿಯನ್ನು) ಕುರಿತು ಇದೇ ಭಾವ ವ್ಯಕ್ತಪಡಿಸಿದ್ದಾರೆ.

ಬಂಧು ಮಖಿಲಸ್ಯ ಜಂತೋಃ
ಬಂಧುರಪರ್ಯಂಕ ಬಂಧರಮಣೀಯಮ್
ವಿಷಮ ವಿಲೋಚನ ಮೀಡೆ
ವೇಗವತೀ ಪುಳಿನ ಕೇಳಿ ನರಸಿಂಹಮ್

ಸಮಸ್ತ ಚರಾಚರ ವಸ್ತುಗಳಿಗೂ, ಸರ್ವವಿಧ ಬಂಧುವಾಗಿರುವ, ವೇಗವತಿ ನದಿ ತೀರದಲ್ಲಿ ಕ್ರೀಡಿಸುವ, ಪರ್ಯಂಕ ಬಂಧದಲ್ಲಿ ಕುಳಿತು ದರ್ಶನವೀಯುತ್ತಿರುವ ಹಾಗೂ ಬೆಸಸಂಖ್ಯೆಯ (ಮೂರು) ಕಣ್ಣುಳ್ಳ ನರಸಿಂಹನನ್ನು ನಾನು ಸ್ತುತಿಸುತ್ತೇನೆ.

ಪರಮಾತ್ಮನೊಬ್ಬನೇ ಸಕಲರಿಗೂ ಸರ್ವವಿಧ ಬಂಧು. ಇತರ ಬಂಧುಗಳಾದ ತಂದೆ, ತಾಯಿ, ಹೆಂಡತಿ, ಸೋದರ ಸೋದರಿಯರು, ಮಕ್ಕಳು ಎಲ್ಲರೂ ಸೋಪಾಧಿಕ ಬಂಧುಗಳು. ನಿರುಪಾಧಿಕ ಸರ್ವವಿಧ ಬಂಧು ಪರಮಾತ್ಮನೊಬ್ಬನೇ. ಈ ತತ್ವವನ್ನು ಎಲ್ಲರೂ ಅರಿಯಬೇಕು. ನಮ್ಮ ಆಳ್ವಾರ್ ಆಚಾರ್ಯರೆಲ್ಲರೂ ಈ ಸತ್ಯವನ್ನು ಮನಗೊಂಡೇ ಪರಮಾತ್ಮನಲ್ಲಿ ಪ್ರಪತ್ತಿಯನ್ನು ಆಚರಿಸಿದರು. ರಾಮಾಯಣದಲ್ಲಿ ಲಕ್ಷ್ಮಣನು ಇದಕ್ಕೆ ನಿದರ್ಶನ.

ಓದಿರಿ. ಓದಿಸಿರಿ.

# ಸಪ್ತಗಿರಿ

ತಿರುಮಲೆ -- ತಿರುಪತಿ ದೇವಸ್ಥಾನಗಳ ಧಾರ್ಮಿಕ ಮಾಸಪತ್ರಿಕೆ ಸಪ್ತಗಿರಿ.

ತೆಲುಗು ತಮಿಳು ಕನ್ನಡ ಹಿಂದಿ ಆಂಗ್ಲ ಭಾಷೆಗಳಲ್ಲಿ ಬೇರೆ ಬೇರೆಯಾಗಿ ಪ್ರಕಟವಾಗುವ ಪತ್ರಿಕೆ.

ಆಧ್ಯಾತ್ಮಿಕ, ಸಾಂಸ್ಕೃತಿಕ, ಧಾರ್ಮಿಕ ವಿಷಯಗಳೊಂದಿಗೆ ವಿಶೇಷಗಳೊಂದಿಗೆ ಪ್ರಕಟವಾಗುವ ಪತ್ರಿಕೆ.

ಸಪ್ತಗಿರಿ ಚಂದಾದಾರರಾಗ ಬಯಸುವವರು ಈ ಕೆಳಗಿನ ಸೂಚನೆಗಳನ್ನು ಗಮನಿಸಬೇಕೆಂದು ಪ್ರಾರ್ಥನೆ.

* ಸಪ್ತಗಿರಿಯ ವಾರ್ಷಿಕ ಚಂದಾ ಇಪ್ಪತ್ನಾಲ್ಕು ರೂಪಾಯಿಗಳು ಮಾತ್ರ. ಎಷ್ಟು ವರ್ಷದ ಚಂದಾ ಹಣವನ್ನಾದರೂ ತುಂಬಬಹುದು. (ಆಜೀವ ಸದಸ್ಯತ್ವವಿಲ್ಲ)
* ತಮ್ಮ ಚಂದಾ ಹಣವನ್ನು ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಎಂ.ಓ/ಡಿ.ಡಿ./ಪಿ.ಓ. ರೂಪದಲ್ಲಿ ಕಳುಹಿಸಿ (ಚೆಕ್‌ಗಳನ್ನು ಅಂಗೀಕರಿಸಲಾಗದು).
* ತಮಗೆ ಯಾವ ಭಾಷೆಯ ಸಪ್ತಗಿರಿ ಬೇಕೆಂಬುದನ್ನು ಸ್ಪಷ್ಟವಾಗಿ ಬರೆಯಿರಿ.
* ತಮ್ಮ ಪೂರ್ಣ ವಿಳಾಸವನ್ನು ಬಿಡಿಬಿಡಿಯಾದ ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆಯಿರಿ. (ಎಂ. ಓ. ಕೂಪನ್ನಿನ ವಿಷಯ ಬರೆಯುವ ಸ್ಥಳದಲ್ಲಿ)
* ಚಂದಾ ಹಣ ತಲುಪಿದ ಮಾರನೆಯ ತಿಂಗಳಿನಿಂದ ಸಪ್ತಗಿರಿಯನ್ನು ಕಳುಹಿಸಲಾಗುವುದು.
* ಚಂದಾ ಹಣವನ್ನು ಕಳುಹಿಸಿದ 30 ದಿನಗಳಲ್ಲಿ ಸಪ್ತಗಿರಿ ತಮಗೆ ಬಾರದಿದ್ದಲ್ಲಿ ತಮ್ಮ ಎಂ.ಓ./ಡಿ.ಡಿ. ಕ್ರಮಸಂಖ್ಯೆ ದಿನಾಂಕ ಮೊದಲಾದ ವಿವರಗಳೊಂದಿಗೆ ಪೂರ್ಣವಿಳಾಸವನ್ನು ನೀಡಿ ಕಾಗದ ಬರೆಯಿರಿ.

ಈ ಮೊದಲೇ ಚಂದಾದಾರರಾದವರಿಗೆ ಸೂಚನೆಗಳು :

* ಹೊಸ ಚಂದಾನಂಬರುಗಳನ್ನು ನೀಡಲಾಗಿದೆ. ದಯವಿಟ್ಟು ಗಮನಿಸಿ.
* ತಮ್ಮ ಚಂದಾ ಮೊಬಲಗು ಮುಗಿಯುವ ಒಂದು ತಿಂಗಳ ಮೊದಲೇ ಪುನಃ ಚಂದಾಹಣವನ್ನು ಇತರ ಕಾರಣಗಳಿಗಾಗಿ ಬರೆಯುವಾಗ ದಯವಿಟ್ಟು ತಮ್ಮ ಹೊಸ ಸದಸ್ಯತ್ವ ಸಂಖ್ಯೆಯನ್ನು ತಪ್ಪದೇ ತಮ್ಮ ವಿಳಾಸದೊಡನೆ ನಮೂದಿಸಿ ಬರೆಯಿರಿ.

ಸಂಪಾದಕರು :
**ಸಪ್ತಗಿರಿ**
ತಿ.ತಿ.ದೇ., ತಿರುಪತಿ.

**ಕೊಂಡು ಓದಿರಿ. ಕೊಂಡು ಓದಿಸಿರಿ.**



'ಅಹ ತಾವನ್ಮಹಾರಾಜೇ
ಪಿತೃತ್ವಂ ನೋಪಲಕ್ಷ್ಯತೆ
ಭ್ರಾತಾ, ಭರ್ತಾಚ ಬಂಧುಶ್ಚ
ಪಿತಾ ಚ ಮಮ ರಾಘವ'

ಎಂಬಲ್ಲಿ ಸರ್ವವಿಧ ಬಂಧುತ್ವವನ್ನು ಪ್ರಕಟಿಸಿದ್ದಾನೆ. ಶ್ರೀ ಆಂಡಾಳ್ ಸಹ ತಿರುಪ್ಪಾವೈ ಹಾಡಿನಲ್ಲಿ 'ಉನ್ನೊಡು ಉರವಿಲ್ ನಮಕ್ಕಿಂಗೊಳಿಕ್ಕೆ ಒಳಿಯಾದು' ಎಂದು ಹೇಳಿ ಅಳಿಸಲಾಗದ ಸಂಬಂಧದ ಬಗ್ಗೆ ಹೇಳಿದ್ದಾಳೆ.

ನರಸಿಂಹನು ಯೋಗಾಸನದಲ್ಲಿ ವಿರಾಜಿಸಿದ್ದಾನೆ. ಇದಕ್ಕೆ ಪರ್ಯಂಕ ಬಂಧ ಎಂದು ಹೆಸರು. ಸಾಮಾನ್ಯವಾಗಿ ಮಂಡಿಗಳು ಹಾಗೂ ಬೆನ್ನು ಸೇರಿದಂತೆ ವಸ್ತ್ರವನ್ನು ಕಟ್ಟಿ ಕುಳಿತಿರುವುದು ಈ ಆಸನದ ವೈಶಿಷ್ಟ್ಯ. ಅನೇಕ ದಿವ್ಯದೇಶಗಳಲ್ಲಿ ಶ್ರೀ ಯೋಗಾನರಸಿಂಹನು ಈ ವಿಧವಾಗಿಯೇ ಸೇವೆ ನೀಡಿದ್ದಾನೆ. ಇದನ್ನು ರಮಣೀಯವಾದ ದರ್ಶನ ಎಂದು ಆಚಾರ್ಯರು ಉದ್ಗರಿಸಿದ್ದಾರೆ. ಮತ್ತೊಮ್ಮೆ ಮೂರು ಕಣ್ಣಿನ ಪ್ರಸ್ತಾಪ ಮಾಡಿದ್ದಾರೆ. ಚಂದ್ರ, ಸೂರ್ಯ, ಅಗ್ನಿ ಇವರುಗಳನ್ನು ಕಣ್ಣುಗಳನ್ನಾಗಿ ಉಳ್ಳ ನರಸಿಂಹನು, ಭಕ್ತರಿಗೂ ತಂಪನ್ನೂ, ದುಷ್ಟರಿಗೆ ತಾಪವನ್ನೂ ನೀಡುತ್ತಾನೆಂಬುದು ಅಭಿಪ್ರಾಯ.

ಸ್ವಸ್ಥಾನೇಷು ಮರುದ್ಗಣಾನ್ ನಿಯಮಯನ್
ಸ್ವಾಧೀನ ಸರ್ವೇಂದ್ರಿಯಃ
ಪರ್ಯಂಕ ಸ್ಥಿರ ಧಾರಣ ಪ್ರಕಟಿತ
ಪ್ರತ್ಯಂಕ ಮುಖ್ಯಾವಸ್ಥಿತಿಃ
ಪ್ರಾಯೇಣ ಪ್ರಣಿಪರುಷಃ ಪ್ರಭುರಸೌ
ಯೋಗಂ ನಿಜಂ ಶಿಕ್ಷಯನ್
ಕಾಮಾನಾತನುತಾದ ಶೇಷ ಜಗತಾಂ
ಕಾಮಾಸಿಕಾಕೇಸರಿ

'ತನ್ನ ಚರಣಾರವಿಂದಗಳನ್ನು ಆಶ್ರಯಿಸಿದವರಿಗೆ ತನ್ನನ್ನು ಹೇಗೆ ಧ್ಯಾನಿಸಬೇಕೆಂದು ತಿಳಿಸುವವನೂ, ಯೋಗಪಟುವೂ, ಇಂದ್ರಿಯಗಳನ್ನು ಸ್ವಾಧೀನಪಡಿಸಿಕೊಂಡಿರುವವನೂ, ಪರ್ಯಂಕ ಬಂಧವನ್ನು ಅವಲಂಭಿಸಿರುವವನೂ ಆಗಿರುವ ಕಾಮಾಸಿಕ ಹರಿಯು ಸಮಸ್ತ ಜಗತ್ತಿಗೂ ಇಷ್ಟ ಕಾಮನೆಗಳನ್ನು ಉಂಟುಮಾಡಲಿ.'

ಈ ಶ್ಲೋಕವನ್ನು ಶಾರ್ದೂಲ ವಿಕ್ರೀಡಿತ ವೃತ್ತದಲ್ಲಿ ರಚಿಸಲಾಗಿದೆ. ಪರಮಾತ್ಮನಿಗೆ ಯೋಗಾಭ್ಯಾಸದಿಂದ ಯಾವ ಪ್ರಯೋಜನವೂ ಇಲ್ಲ. ಕಾಮಾಸಿಕ ಹರಿಯನ್ನು ದರ್ಶಿಸಿದವರಿಗೆ, ಅವನು ಯೋಗಾಭ್ಯಾಸವನ್ನು ಅಂದರೆ, ಪ್ರಾಣಾಯಾಮ, ಇಂದ್ರಿಯ ನಿಗ್ರಹಗಳನ್ನು ತೀವ್ರವಾಗಿ ಅನುಷ್ಠಿಸುತ್ತಿರುವಂತೆ

ತೋರುತ್ತದೆ. ಇದು ಕೇವಲ ನಮಗಾಗಿ ಯೋಗಾಭ್ಯಾಸವನ್ನು ಹೇಗೆ ಆಚರಿಸದೇಕೆಂದು ತೋರಿಸುವಂತಿದೆ. 'ಪ್ರತ್ಯಂಕ ಮುಖಾವಸ್ಥಿತಿ' ಎಂದರೆ ಅಂತರ್ಮುಖಿತ್ವ, ಅಂತರ್ಮುಖಿಯಾಗಿ ಎಲ್ಲರನ್ನೂ ನಿಯಂತ್ರಣದಲ್ಲಿ ಇಡುವಂತಿದೆ. ಇಂತಹ ಕಾಮಾಸಿಕನು, ಜಗತ್ತಿನಲ್ಲಿ ಎಲ್ಲರಿಗೂ ಅವರವರ ಧರ್ಮವಿರುದ್ಧವಲ್ಲದ ಕಾಮನೆಗಳನ್ನು ಕೈಗೂಡಿಸಲಿ.

ವಿಕಸ್ವರ ನಖಸ್ವರುಕ್ಷತಿ ಹಿರಣ್ಯವಕ್ಷಃಸ್ಥಲಿ
ನಿರರ್ಗಲ ವಿನಿರ್ಗಲದ್ರುಧಿರಸಿಂಧುಸಂಧ್ಯಾಯಿತಾಃ
ಅವಂತುಮದನಾಸಿಕಾಮನುಜಪಂಚವಕ್ತ್ರಸ್ಯಮಾಂ
ಅಹಂ ಪ್ರಥಮಿಕಾಮಿಥಃ ಪ್ರಕಟಿತಾಹವಾ ಬಾಹವಃ

'ಯಾವ ಕಾಮಾಸಿಕ ನರಕೇಸರಿಯ ಬಾಹುಗಳು ಹಿರಣ್ಯಕಶಿಪುವಿನ ಹೃದಯದಿಂದ ಧಾರಾಕಾರವಾಗಿ ಹೊರಬರುತ್ತಿರುವ ರಕ್ತದ ಪ್ರವಾಹದಿಂದ ತೊಯ್ದು ಕೆಂಪಾದ ಸಂಜೆಯಂತೆ ತೋರುತ್ತನೆಯೋ, ಯಾವ ಬಾಹುಗಳು ಒಂದಕ್ಕೊಂದು ತಗುಲಿ ಕಾರ್ಮೋಡದಂತೆ ಶಬ್ದ ಉಂಟುಮಾಡುವುವೋ ಆ ಬಾಹುಗಳು ನನ್ನನ್ನು ಕಾಪಾಡಲಿ !

ಈ ಶ್ಲೋಕವು ಪರಮಾತ್ಮನ ಬಾಹುಗಳನ್ನು ವರ್ಣಿಸುತ್ತದೆ. ನರಹರಿಯ ಬಾಹುಗಳು ಹಿರಣ್ಯಕಶಿಪುವಿನ ರಕ್ತದಿಂದ ತೊಯ್ದು, ಒಂದಕ್ಕೊಂದು ತಗುಲಿದಾಗ ಕಾರ್ಮೋಡಗಳಂತೆ ಧ್ವನಿ ಮಾಡುತ್ತವೆ. ಇಲ್ಲಿ ಪರಮಾತ್ಮನ ನಾಲ್ಕು ಬಾಹುಗಳೂ ಹಿರಣ್ಯಕಶಿಪುವನ್ನು ಸಂಹರಿಸುವುದರಲ್ಲಿ ನಿರತವಾಗಿವೆ. ಅಂದರೆ, ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ಕಾಪಾಡುವ ಸಲುವಾಗಿ, ನಾಲ್ಕು ಬಾಹುಗಳು ಒಂದಕ್ಕೊಂದು ಪೈಪೋಟಿ ನಡೆಸುವಂತಿದೆ. ಒಂದೊಂದು ಬಾಹುವು ಒಂದೊಂದು ಪುರುಷಾರ್ಥವನ್ನು ತನ್ನ ಭಕ್ತರಿಗೆ ನೀಡಲು 'ನಾ ಮುಂದು, ತಾ ಮುಂದು' ಎಂದು ಓಡಿಬರುವಂತಿದೆ ಎಂಬುದು ಭಾವಾರ್ಥ.

ಸಟಾಪಟಲ ಭೀಷಣೇ ಸರಭಸಾಟ್ಟಹಾಸೋದ್ಭಟೇ
ಸ್ಫುರತ್ಕ್ರುಧಿ ಪರಿಸ್ಫುಟ ಭ್ರುಕುಟಿಕೇಪಿ ವಕ್ತ್ರೇಕೃತೇ
ಕೃಪಾಕಪಟ ಕೇಸರಿನ್ ದನುಜ ಡಿಂಭ ದತ್ತಸ್ತನಾ
ಸರೋಜಸದೃಶಾದೃಶಾ ವ್ಯತಿವಿಷಜ್ಯ ತೇ ವ್ಯಜ್ಯತೆ

'ಸಿಂಹದಂತೆ ಛದ್ಮ ವೇಷದಲ್ಲಿರುವ ಹರಿಯೇ ಯಾವ ನಿನ್ನ ಮುಖಾರವಿಂದವು, ರಾಕ್ಷಸನ ಮೇಲಿನ ಕೋಪದಿಂದ ಸಟಾಗ್ರಗಳನ್ನು, ಕಣ್ಣಾಲಿಗಳನ್ನು ತಿರುಗಿಸುತ್ತಾ, ಅಟ್ಟಹಾಸದಿಂದ ನಗುತ್ತಾ ಭೀಷಣಪ್ರಾಯವಾಗಿದೆಯೋ, ಅದೇ ಮುಖಾರವಿಂದವು ನಿನ್ನ ಭಕ್ತೋತ್ತಮನಾದ ಪ್ರಹ್ಲಾದನನ್ನು ನೋಡುವಾಗ ಸ್ತನ್ಯಪಾನವನ್ನು ನೀಡುವ ತಾಯಿಯ ಕಣ್ಣುಗಳಂತೆ ಆಹ್ಲಾದಕರವಾಗಿ, ಕೃಪೆಯ ಕಟಾಕ್ಷವನ್ನು ಸುರಿಸುತ್ತದೆ. ಅದ್ಭುತ ಕೇಸರಿಯೆಂದು ವರ್ಣಿಸಿದ ನರಸಿಂಹನ ಅದ್ಭುತ ಸ್ವರೂಪವನ್ನು ಈ ಶ್ಲೋಕದಲ್ಲಿ ಆಚಾರ್ಯರು ಬಣ್ಣಿಸಿದ್ದಾರೆ. ಹಿರಣ್ಯಕಶಿಪುವಿಗೆ ನರಸಿಂಹನ ಸ್ವರೂಪ ಅತ್ಯಂತ ಭಯಾನಕ. ಆದರೆ ಅದೇ ಸಮಯದಲ್ಲಿ ಪ್ರಹ್ಲಾದನಿಗೆ ಆಹ್ಲಾದಕರ ದರ್ಶನ. ಈ ರೀತಿ ಪರಸ್ಪರ ವಿರುದ್ಧ ಸ್ವಭಾವವುಳ್ಳ ದರ್ಶನ ನೀಡುವುದು ಪರಮಾತ್ಮನೊಬ್ಬನಿಗೇ ಸಾಧ್ಯ, ಅವನು 'ಅಸಾಧ್ಯಸಾಧಕ' ನಲ್ಲವೇ. ಈ ಭಾವವನ್ನು ತಮ್ಮ ಅನೇಕ ಸ್ತೋತ್ರಗಳಲ್ಲಿ ವಿಶದಪಡಿಸಿದ್ದಾರೆ. ಗೋಪಾಲ ವಿಂಶತಿ ಮತ್ತು ದಯಾಶತಕಗಳಲ್ಲಿ ಇದೇ ರೀತಿಯ ವರ್ಣನೆ ಇದೆ. ಪರಮಾತ್ಮನ ಕಣ್ಣುಗಳು ಯಾವಾಗಲೂ ಭಕ್ತರ ಮೇಲೆ ಕೃಪೆಯೆಂಬ ಅಮೃತವನ್ನು ಸುರಿಸುತ್ತದೆ.

ತ್ವಯಿ ರಕ್ಷತಿ ಶಿಕ್ಷಕಃ ಕಿಮನ್ಯೈಃ
ತ್ವಯಿ ಚಾರಕ್ಷತಿ ರಕ್ಷಕೈಃ ಕಿಮನ್ಯೈಃ
ಇತಿ ನಿಶ್ಚಿತ ಧೀ ಶ್ರಯಾಮಿ ನಿತ್ಯಂ
ನೃಹರೇ ವೇಗವತೀ ತಟಾಶ್ರಯಂ ತ್ವಾಂ

'ಹೇ ನರಸಿಂಹ ಪ್ರಭೋ, ನೀನು ರಕ್ಷಿಸಿದಲ್ಲಿ ನನಗೆ ದೇರೆ ರಕ್ಷಕರ ಅಗತ್ಯವಿಲ್ಲ. ನೀನು ರಕ್ಷಿಸದಿದ್ದಲ್ಲಿ ನನಗೆ ಇತರ ರಕ್ಷಕರಿಂದ ಆಗದೇಕಾದದ್ದೇನಿದೆ? ಈ ಸತ್ಯವನ್ನು ಮನಗೊಂಡು ವೇಗವತೀ ದಡದಲ್ಲಿ ಬಿಜಯ ಮಾಡಿರುವ ನಿನ್ನೊಬ್ಬನನ್ನೇ ಆಶ್ರಯಿಸುತ್ತೇನೆ. ನನ್ನನ್ನು ರಕ್ಷಿಸು.'

ಒಂದು ಸಾರ್ವಕಾಲಿಕ ಸತ್ಯವನ್ನು ಈ ಶ್ಲೋಕದಲ್ಲಿ ಆಚಾರ್ಯರು ಪ್ರಚುರಪಡಿಸಿದ್ದಾರೆ. ಪರಮಾತ್ಮನೊಬ್ಬನೇ ನಮ್ಮನ್ನು ಸರ್ವಕಾಲಗಳಲ್ಲಿಯೂ ರಕ್ಷಿಸುವವನು.

ಪರಮಾತ್ಮನ ಅನುಗ್ರಹವಿಲ್ಲದಿದ್ದಲ್ಲಿ ಇತರರ ಸಹಾಯ ವ್ಯರ್ಥ. ಪರಮಾತ್ಮನ ಕೃಪೆ ಇದ್ದಲ್ಲಿ ಇತರರ ಸಹಾಯ ಅನಗತ್ಯ. ಈ ಸತ್ಯವನ್ನು ಮನಗೊಂಡು ಭಗವದ್ಭಕ್ತರೆಲ್ಲರೂ ಎಲ್ಲಾ ಕಾಲದಲ್ಲೂ ಪರಮಾತ್ಮನೊಬ್ಬನನ್ನೇ ಆಶ್ರಯಿಸುವುದು. ಇತರ ಕ್ಷುದ್ರ ಜನಗಳ ಕೃಪೆಯನ್ನು ದೇಡುವುದಲ್ಲ. ಈ ಭಾವನೆ ನಮ್ಮಲ್ಲಿ ಇದ್ದುದೇ ಆದರೆ, ನಮ್ಮ ಕಷ್ಟ ಕಾಲಗಳಲ್ಲಿ ನಾವು ಎದೆಗುಂದುವುದಿಲ್ಲ. ಭಗವಂತನ ಅನುಗ್ರಹದಿಂದ ಎಲ್ಲಾ ಸಂಕಟಗಳನ್ನು ಎದುರಿಸಿ ಪಾರಾಗಬಹುದು. ಸೀತಾ ದೇವಿಯು ಶ್ರೀರಾಮನೊಬ್ಬನೇ ತನ್ನನ್ನು ರಕ್ಷಿಸಲು ಸಮರ್ಥನೆಂಬ ದೃಢ ವಿಶ್ವಾಸದಿಂದ ಇದ್ದದ್ದನ್ನು ಇಲ್ಲಿ ಸ್ಮರಿಸಬಹುದು.

ಇತ್ಥಂ ಸ್ತುತಃ ಸಕೃದಿಹಾಷ್ಟಭಿರೇಷ ಪದ್ಯೈ
ಶ್ರೀ ವೆಂಕಟೇಶ ರಚಿತೈ ಸ್ತ್ರಿದ ಶೇಂದ್ರ ವಂದ್ಯಃ
ದುರ್ಧಾಂತ ಘೋರ ದುರಿತ ದ್ವಿರದೇಂದ್ರ ಭೇದಿ
ಕಾಮಾಸಿಕಾ ನರಹರಿರ್ವಿತನೋತು ಕಾಮಾನ್

'ಈ ಮೇಲಿನ ಎಂಟು ಶ್ಲೋಕಗಳಿಂದ ಕಾಮಾಸಿಕ ಕೇಸರಿಯನ್ನು ಸ್ತುತಿಸುವವರಿಗೆ ಶ್ರೀ ವೆಂಕಟೇಶನಿಂದ ರಚಿತವಾದ ಈ ಸ್ತೋತ್ರವು ದೇವಾದಿದೇವರಿಂದ ವಂದ್ಯನಾದ, ನರರ ಪಾಪಗಳೆಂಬ ಮದದಾನೆಯನ್ನು ನಿಗ್ರಹಿಸುವ ಆ ನರಹರಿಯು ಭಕ್ತರ ಅಭೀಷ್ಟಗಳನ್ನು ನೀಡಲಿ.'

ಕೊನೆಯಾದಾದ ಈ ಶ್ಲೋಕದಲ್ಲಿ ಫಲಶ್ರುತಿಯನ್ನು ಹೇಳಲಾಗಿದೆ. ಕಾಮಾಸಿಕ ಹರಿಯು ಕಾಮಪ್ರದನೂ ಹೌದು. ನಮ್ಮ ಪಾಪಗಳೆಂಬ ಮದದಾನೆಯನ್ನು ಸಿಂಹರೂಪವನ್ನು ತಾಳಿ ಅವುಗಳನ್ನು ನಾಶಮಾಡಿ, ನಮಗೆ ಸರ್ವ ಮಂಗಳವನ್ನು ಉಂಟುಮಾಡುತ್ತಾನೆ ಎಂಬುದು ಭಾವಾರ್ಥ.

ಆನೆಗೆ ಸಿಂಹ ಸ್ವಪ್ನವಾದರೆ ಮರಣವು ಪ್ರಾಪ್ತವಾಗುವುದು. ಅದರಂತೆ ನರಸಿಂಹನ ಸ್ಮರಣಮಾತ್ರದಿಂದಲೇ ನಮ್ಮ ಪಾಪಗಳೆಂಬ ಮದದಾನೆಯು ನಾಶವಾಗಿ, ಸಕಲ ಇಷ್ಟಾರ್ಥಗಳೂ ಕೈಗೂಡುವುವು. ಇಂತಹ ಕಾಮಾಸಿಕ ಹರಿಯು ಎಲ್ಲರಿಗೂ ಸನ್ಮಂಗಳವನ್ನು ಉಂಟುಮಾಡಲಿ.

ಶ್ರೀಮತೇ ವೇದಾಂತ ದೇಶಿಕಾಯ ನಮಃ ◆

## ಪ್ರಕಟನೆ :

ತಿರುಮಲೆಗೆ ಹೋಗುವ ಘಾಟ್‌ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್‌ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

ತಿ. ತಿ. ದೇ.

# ಕೋಟಿಲಿಂಗಸ್ಥಳ

---ಗುರುರಾಜ.







ಕೋಲಾರ ಜಿಲ್ಲೆ ಬಂಗಾರುಪೇಟೆ ತಾಲ್ಲೂಕು ಬೇತಮಂಗಲ ಹೋಬಳಿಗೆ ಸೇರಿದ ಕಮ್ಮಸಂದ್ರ ಒಂದು ಚಿಕ್ಕಗ್ರಾಮ. ಈ ಸ್ಥಳ ಭಗವತ್ ಪ್ರೇರಣೆಯಿಂದ ಕೋಟಿ ಲಿಂಗಗಳಿಂದ ಮತ್ತು ಬ್ರಹ್ಮ ವಿಷ್ಣು, ಮಹೇಶ್ವರರ ತ್ರಿಮೂರ್ತಿದೇವಾಲಯ ಒಂದೇ ದೇವಾಲಯದಲ್ಲಿ ಕಂಗೊಳಿಸುತ್ತಿದೆ. ಕಲಿಯುಗದಲ್ಲಿ ೧೦೮ ಗುಡಿ ಮತ್ತು ೧೦೮ ಲಿಂಗಗಳು ಪ್ರತ್ಯೇಕ ಸ್ಥಳದಲ್ಲಿ ಭಕ್ತರಿಗೆ ೧೦೮ ಹೆಸರುಗಳಿಂದ ದರ್ಶನ ನೀಡುತ್ತಾ ಯಾವಾಗಲೂ ಭಕ್ತರಿಂದ ತುಂಬಿರುವ ಪುಣ್ಯಸ್ಥಳ ಕಮ್ಮಸಂದ್ರ ಗ್ರಾಮ.

ಈ ಸ್ಥಳ ಕೆ.ಜಿ.ಎಫ್. ನಿಂದ ಬೇತಮಂಗಲಕ್ಕೆ ಹೋಗುವ ಹೆದ್ದಾರಿಯಲ್ಲಿದೆ. ಇದು ತ್ರೇತಾಯುಗದಲ್ಲಿ ಶ್ರೀರಾಮಚಂದ್ರ ಮೂರ್ತಿ ಅಶ್ವಮೇಧಯಾಗವನ್ನು ಮಾಡಿದಾಗ ಅಶ್ವವನ್ನು ಭಕ್ತರ ದರ್ಶನಕ್ಕೆ ಬಿಟ್ಟಾಗ ಅದು ಕೋಲಾರ ಚಿನ್ನದ ಗಣಿ ಪ್ರದೇಶದಲ್ಲಿ ಸಂಚಾರಮಾಡಿ ಕಮ್ಮಸಂದ್ರ ಗ್ರಾಮದ ಮುಖಾಂತರ ಆವಣಿ ಕ್ಷೇತ್ರ ತಲುಪಿರಬಹುದೆಂದು ದೊಡ್ಡವರು ಹೇಳುವ ಪುರಾಣ ಕಥೆಯಾಗಿದೆ. ಆವಣಿ ಕ್ಷೇತ್ರದಲ್ಲಿ ಕುದುರೆಯನ್ನು ಲವ - ಕುಶರು ಕಟ್ಟಿರುವ ಸ್ಥಳ ಮತ್ತು ಅಶ್ವವು ಕಲ್ಲು ಬಂಡೆಯನ್ನು ತಿಂದಿರುವುದನ್ನು ಈಗಲೂ ನೋಡಬಹುದು, ಅಶ್ವ ಹಾಗೂ ದೇವತೆಗಳ ಸಂಚಾರದ ಪಾದಸ್ಪರ್ಶದಿಂದ ಈಗಿನ ಕೆ.ಜಿ. ಎಫ್. ಬಂಗಾರ ದೊರೆಕುವ ಸ್ಥಳವಾಗಿದೆ ಮತ್ತು ಅವರು ಸಂಚರಿಸಿದ ಸ್ಥಳ ಕಮ್ಮಸಂದ್ರಗ್ರಾಮ ಈಗಿನ ಪುಣ್ಯಕ್ಷೇತ್ರವಾಗಿದೆ.

ಅಶ್ವವು ನೀರುಕುಡಿದ ಸ್ಥಳ ಈಗಲೂ ದೇವಸ್ಥಾನದ ಪಕ್ಕದಲ್ಲಿ ಕಲ್ಯಾಣಿಯಾಗಿರುವುದನ್ನು ಕಾಣಬಹುದು. ದೇವಸ್ಥಾನದ ಸ್ಥಳದಲ್ಲಿ ಶ್ರೀ ವಾಲ್ಮೀಕಿ ಆಶ್ರಮವಿತ್ತೆಂದು ಮತ್ತು ಇಲ್ಲಿ ದಕ್ಷಬ್ರಹ್ಮಯಜ್ಞ ಮಾಡಿದ ಸ್ಥಳ ಎಂದು ಹಿರಿಯರು ಹೇಳುತ್ತಿದ್ದರಂತೆ.

ಈಗ ಈ ಕ್ಷೇತ್ರ ಶ್ರೀ ಸಾಂಬಶಿವಮೂರ್ತಿ ಸ್ವಾಮಿಗಳ ಮಾರ್ಗದರ್ಶನದಿಂದ ಶಿವಲಿಂಗಗಳಿಂದ ಭಕ್ತರಿಗೆ ದರ್ಶನ ನೀಡುತ್ತಾ ಮುಂದೆ ಕೋಟಿ ಲಿಂಗಗಳಾಗಿ ದರ್ಶನ ನೀಡುವ ಪುಣ್ಯಕ್ಷೇತ್ರವಾಗುವ ಸಂಭವವಿದೆ. ಪ್ರತಿವರ್ಷದಂತೆ ಈ ವರ್ಷವೂ ೧೯೯೫ ರ ಏಪ್ರಿಲ್ ತಿಂಗಳಲ್ಲಿ ೫೦೧ ಸಾಮೂಹಿಕ ವಿವಾಹಗಳನ್ನು ಏರ್ಪಡಿಸಿರುತ್ತಾರೆ. ಮಕ್ಕಳಿಗೆ ಮನರಂಜನೆಗಾಗಿ ಪ್ರಾಣಿ ಸಂಗ್ರಹಾಲಯ ಹೊಂದಿದೆ. ಇದೇ ೯೫ ರ ಫೆಬ್ರವರಿ ೨೭ ರಂದು ಶಿವರಾತ್ರಿಯದಿನ ಇಲ್ಲಿ ಈಗ ನಿರ್ಮಾಣಹಂತದಲ್ಲಿರುವ ೧೦೮ ಅಡಿ ಶಿವಲಿಂಗವನ್ನು ಉದ್ಘಾಟಿಸುವರೆಂದು ಗೊತ್ತಾಗಿದೆ. ಇಲ್ಲಿಗೆ ಪ್ರತಿ ದಿನ ಸಾವಿರದಿಂದ ಎರಡ ಸಾವಿರದ ವರೆಗೂ ಭಕ್ತಾದಿಗಳು ಒಂದು ಪೂಜೆ ಸಲ್ಲಿಸುತ್ತಾರೆ.



# A HEALING TOUCH

## T. T. DEVASTHANAMS INTRODUCES
## SRI BALAJI AROGYAVARAPRASADINI SCHEME

For ages, Tirumala, the abode of Lord Venkateswara, has been a great centre of pilgrimage Thousands of devotees visit the sacred hills every day and offer their solemn prayers to the Lord for their spiritual and physical well-being.

Alleviating human suffering has been a part of dedicated efforts of TTD to the mankind TTD already manages a Leprosorium, centre for physically handicapped, a poor home and also a central hospital To provide the most advanced medical technology to the needy, the TTD has launched another monument, a blessing from the Lord by opening Sri Venkateswara Institute of Medical Sciences -- a sophisticated super speciality centre on the lines of AIIMS of New Delhi & JIMPER of Pondicherry and PGI of Chandigarh. Total well being of man is the aim of Sri Venkateswara Institute of Medical Sciences, which apart from offering service, training and education in medical sciences, also encourages Research and development

The doors to such a state of the art technology should be open to our poor and disabled brethren.

With a view to achieving this, Sri Venkateswara Institute of Medical Sciences has introduced a New scheme Balaji Arogyavaraprasadini Scheme To accomplish the goal of proving the sophisticated medical technology to every individual at an affordable rate, we invite the generous co-operation of philanthropists and the general public

### The Scheme in essence:

A donor can make an endowment of Rs 1000/- or multiples thereof / Rs 1 lakh / Rs 5 lakhs / Rs. 10 lakhs to T.T Devasthanams which will in turn contribute matching grant The entire amount will be deposited in fixed deposit in a nationalised Bank and the interest accrued on it will be utilised for providing free medical services to the poor and the needy.

A Chair in Sri Venkateswara Institute of Medical Sciences will be named after the donor who contributes Rs 10 lakhs or above. These endowment chairs are purely research oriented.

- Donations can be made by any individual / family / company / firms etc.
- The name of the donor who endows Rs 5 lakhs or more will be displayed prominently in the Reception hall of the hospital.
- The discharge ticket of the benefited patient will carry the name of the donor

### Additional Benefit and facilities :

- Donations to Sri balaji Arogyavaraprasadini Scheme are exempted from Income Tax under 80 (G).
- Paid rooms / Air conditioned rooms will be allotted to family members of the donor in the hospital.
- Paid rooms can be named after donors who contribute a sum of Rs. 5 lakhs or above
- By paying Rs 5 lakhs and above, a donor may sponsor one operation per year
- Donors can sponsor feeding of the In-patients and out-patients They may also sponsor a travel fellowship for the faculty per year.

All donations, by D.Ds drawn in favour of The Executive Officer, T T Devasthanams, Tirupati-517 501 (Andhra Pradesh) should reach the Director, Sri Venkateswara Institute of Medical Sciences, Tirupati along with the following particulars

- Name and address along with the latest passport-size photographs of the family members of the donor who contributes Rs. 1 lakh or more.
- Name and address of the person to whom Income Tax Exemption Certificate is to be issued

The donors are also welcome to offer equipment, vehicles etc to SVIMS or even sponsor health camps in rural areas, if they so desire. Further details can be had from

**The Executive Officer**
**T.T. Devasthanams, Tirupati**
**or**
**The Director**
**Sri Venkateswara Institute of Medical Sciences, Tirupati**

**EXECUTIVE OFFICER**



LORD VENKATESWARA - MUTHYALA KAVACHAM
(Utsava Murthy)

## TIRUMALA TIRUPATI DEVASTHANAMS

# Sri Venkateswara Vanabhivriddhi Scheme

## An Appeal . . .

*He that planteth a tree is the servant of God*
*And Provideth a kindness for many generation*
*And faces that he, hath not seen shall bless him*

Sacred Forests of Tirumala are the precious gift of Lord Venkateswara to mankind. With a view to safeguarding its unique yet delicate ecological condition, Tirumala Tirupati Devasthanams have introduced a series of exciting schemes called **Sri Venkateswara Vanabhivriddhi Schemes.** The Schemes seek to provide a rare opportunity to the public for participation in a massive plantation project implemented by the Forest Department of T.T. Devasthanams.

The salient features of Sri Venkateswara Vanabhivriddhi Schemes are:

**VRIKSHA SAMVARDHANAM :** Under this Scheme, about one acre of land will be brought under plantation.

**Benefits :**

- Plantation will be named after the donor or person of his choice.
- Every year free accommodation on 2 ordinary days at Tirumala for 10 years.
- One paid special darshan every year for 5 persons for 10 years.

**Donation :** Rs. 15,000.

**VRIKSHA PRASADAM :** The Scheme is proposed for raising 100 fruit and flowering seedling every year.

**Benefits :**

- Distribution of one hundred seedlings, both fruit bearing and flowering in the donor's name every year.
- Two days free stay at Tirumala every year on any ordinary days for 10 years.
- One paid special darshan every year for five persons for 10 years.

**Donation :** Rs. 10,000.

**SMARAKA VANALU :** Under this scheme 10 saplings of selected species will be planted in a grove and maintained for five years.

**Benefits :**

- The grove will be named after the donor.
- Every year paid special darshan for five persons for five years.

**Donation :** Rs. 2,000.

**VANA SAMRAKSHANA BHAGA SWAMYAM :** is proposed to protect and improve the natural forest cover on Tirumala hills.

**Benefits :**

- Diplay of the donor's name.
- Paid special darshan for five persons for one year.

**Donation :** Rs. 1,000.

**ADHYAYANA VANALU :** Plantation and maintenance of a variety of species will be taken up under this scheme in the proposed botonical garden at Tirumala.

**Benefits :**

- Display of donor's name near the plant.

**Donation :** Rs. 500.

**VRIKSHA DATTATA :** is a bold scheme featuring adoption and plantation of avenue trees on the ghat road and at Tirumala.

**Benefits :**

- Display of donor's name.

**Donation :** Rs. 250.

We appeal to all devotees to donate liberally and help us to preserve the priceless forest wealth of Tirmala - The Abode of LORD VENKATESWARA.

Please send your donations by Demand draft to the **The Executive Officer, T. T. Devasthanams, TIRUPATI - 517 507.**

**EXECUTIVE OFFICER**

# ಚತುಃಶ್ಲೋಕೀ

---ಡಾ. ವಿ. ಎಸ್. ಸಂಪತ್ಕುಮಾರಾಚಾರ್ಯ.

ರಾಮಾನುಜಾಚಾರ್ಯರಿಗಿಂತ ಹಿಂದಿನ ಆಚಾರ್ಯರಲ್ಲಿ ಯಾಮುನಾಚಾರ್ಯರ ಸ್ಥಾನವು ವಿಶಿಷ್ಟವಾದುದು. ಅವರು ತಮಿಳುನಾಡಿನ ದಕ್ಷಿಣ ಆರ್ಕಾಟ್ ಜಿಲ್ಲೆಯ ವೀರನಾರಾಯಣ ಪುರದಲ್ಲಿ ನಾಥಮುನಿಗಳ ಪುತ್ರರಾದ ಈಶ್ವರಭಟ್ಟರ ಪುತ್ರರಾಗಿ ಸು. ಕ್ರಿ.ಶ. ೯೧೬ ರಲ್ಲಿ ಜನ್ಮತಾಳಿದರು. ಆಳವಂದಾರ್ ಎಂಬ ಹೆಸರು ಪಡೆದು ಪ್ರಸಿದ್ಧರಾದರು. ವಿಶಿಷ್ಟಾದ್ವೈತ ಸಿದ್ಧಾಂತವನ್ನು ಭದ್ರವಾದ ತಳಹದಿಯ ಮೇಲೆ ನಿಲ್ಲಿಸಲು ಹಲವು ಗ್ರಂಥಗಳನ್ನು ರಚಿಸಿದರು.

ತಾವು ಭಗವದ್ದರ್ಶನ ಮಾಡಿ ಅನುಭವಿಸಿದ ಆನಂದವನ್ನು ಎಲ್ಲರೂ ಅನುಭವಿಸಿ ಉದ್ಧಾರವಾಗಬೇಕೆಂದು ಸ್ತೋತ್ರರತ್ನ ಮತ್ತು ಚತುಃಶ್ಲೋಕೀ ಎಂಬ ಪ್ರಸಿದ್ಧವಾದ ಸ್ತೋತ್ರಗಳನ್ನು ರಚಿಸಿದರು. ಕಾಂತಾ ನಾಯಕನ ವಿಷಯವಾದ ಸ್ತೋತ್ರವು ಸ್ತೋತ್ರರತ್ನ, ತದುತ್ತರ ಶ್ರೀದೇವಿಯ ಮಹಿಮಾವರ್ಣನೆಯನ್ನು ಅವಳಿಂದ ಜಗದುದ್ಧಾರಕ್ಕೆ ಏರ್ಪಡುವ ಉಪಕಾರವನ್ನು, ಸಂಗ, ಸೌಭಾಗ್ಯ ಕರ್ತವ್ಯ ಇವುಗಳನ್ನು ಕಾಂತಾಸ್ತೋತ್ರವೆಂಬ ಚತುಃಶ್ಲೋಕಿಯಲ್ಲಿ ಕಾಣಬಹುದು. ಈ ಸ್ತೋತ್ರವೇ ಮೊಟ್ಟಮೊದಲು ರಚಿತವಾದ ವೈಷ್ಣವ ಸಂಪ್ರದಾಯದ ಲಕ್ಷ್ಮೀಸ್ತೋತ್ರ. ಇದನ್ನು ಈಗಲೂ ಪ್ರತಿದಿನವೂ ಅನುಸಂಧಾನ ಮಾಡುವ ವಾಡಿಕೆಯಿದೆ. ಲಕ್ಷ್ಮೀಕಟಾಕ್ಷ ಉಂಟಾಗುವುದೆಂಬ ಅನುಭವಸಿದ್ಧವಾದ ನಂಬಿಕೆಯಿಂದ ಶ್ರದ್ಧಾವಂತರಾದ ಸ್ತ್ರೀಯರು ನಿತ್ಯವೂ ಸಂಧ್ಯಾಕಾಲದಲ್ಲಿ ಈ ಸ್ತೋತ್ರವನ್ನು ದೇವರಸನ್ನಿಧಿಯಲ್ಲಿ ಪಠಿಸುತ್ತಾರೆ.

ವಿಗಾಹೇ ಯಾಮುನಂ ತೀರ್ಥಂ
ಸಾಧು ಬೃಂದಾವನೇ ಸ್ಥಿತಮ್
ನಿರಸ್ತ ಜಿಹ್ಮಗಸ್ಪರ್ಶೇ
ಯತ್ರ ಕೃಷ್ಣಃ ಕೃತಾದರಃ

ಸತ್ಪುರುಷರ ಸಮೂಹಗಳ ರಕ್ಷಣೆಗಾಗಿ ಏರ್ಪಟ್ಟು ದುಷ್ಟರ ಸ್ಪರ್ಶವಿಲ್ಲದಂತಾಗಿ, ಶ್ರೀಕೃಷ್ಣನ ಆದರಕ್ಕೆಪಾತ್ರವಾದ ಯಾಮುನಾಚಾರ್ಯರ ಸೂಕ್ತಿ ಎಂಬ ತೀರ್ಥದಲ್ಲಿ ಮುಳುಗಿ ಸ್ನಾನಮಾಡುತ್ತೇನೆ.

ಕಾನ್ತಸ್ತೇ ಪುರುಷೋತ್ತಮಃ
ಫಣಿಪತಿಃ ಶಯ್ಯಾ ಆಸನಂ;
ವಾಹನಂ ವೇದಾತ್ಮಾ ವಿಹಗೇಶ್ವರಃ;
ಯವನಿಕಾ ಮಾಯಾ ಜಗನ್ಮೋಹಿನೀ
ಬ್ರಹ್ಮ ಈಶಾದಿ ಸುರವ್ರಜಃ
ಸದಯಿತಃ, ತ್ವದ್ದಾಸದಾಸೀಗಣಃ
'ಶ್ರೀಃ' ಇತ್ಯೇವ ಚ ನಾಮತೇ;
ಭಗವತಿ, ಬ್ರೂಮಃ ಕಥಂ ತ್ವಾಂ ವಯಂ

ನಿನ್ನಕಾಂತ ಪುರುಷೋತ್ತಮ; ಶಯ್ಯೆ ಮತ್ತು ಆಸನ ಫಣಿಪತಿಯಾದ ಆದಿಶೇಷ; ವಾಹನವೋ ವೇದಾತ್ಮನಾದ ಪಕ್ಷಿರಾಜ ಗರುಡ; ಯವನಿಕೆಯೋ ಜಗನ್ಮೋಹಿನಿಯಾದ ಮಾಯೆ; ನಿನ್ನ ದಾಸದಾಸೀಗಣಗಳೋ ಪತ್ನೀಸಹಿತರಾದ ಬ್ರಹ್ಮ ಶಿವ ಮುಂತಾದ ದೇವತೆಗಳ ಸಮೂಹಗಳು; ನಿನ್ನ ಹೆಸರೋ 'ಶ್ರೀ' ಎಂದು. ಇಂತಹ ನಿನ್ನನ್ನು, ಎಲೈ ಭಗವತಿಯೇ! ನಾವು ಹೇಗೆ ತಾನೇ ಸ್ತುತಿಸೇವು?

ವಿಶೇಷಾರ್ಥ : ಈಶ್ವರಕಾಂತೆಯನ್ನು ಉದ್ದೇಶಿಸಿ ಯಾಮುನಾಚಾರ್ಯರು ಈ ಶ್ಲೋಕದಲ್ಲಿ ಬಿನ್ನವಿಸಿದ್ದಾರೆ. ಕಾಂತಸ್ತೇ -- ಇದರಲ್ಲಿ ಕಾಂತ ಶಬ್ದವು ಅತಿ ಮುಖ್ಯ. ಶ್ರೀದೇವಿಯ ಮನಸ್ಸಮರ್ಪಕವಾಗಿ ದೊರಕಿದ ಸಂಗಡಿಗನು ಸಮರ್ಪಕವಾಗಿರುವುದರಿಂದ ಬೇಸರಕ್ಕೆ ಅವಕಾಶವಿಲ್ಲ. ಆ ಕಾರಣ ನಿತ್ಯಯೋಗ. ಶ್ರೀದೇವಿಯ ಸಹವಾಸದಿಂದ ಸಂಗಡಿಗನಿಗೆ ದೊರಕಿದ ಒಂದು ಅದ್ಭುತಸ್ಥಾನವೆಂದರೆ ಪುರುಷೋತ್ತಮತ್ವ. ಪುರುಷಃ, ಉತ್‌ಪುರುಷಃ, ಉತ್ತರ ಪುರುಷಃ, ಉತ್ತಮಪುರುಷಃ -- ಎಂದು ಈ ಶಬ್ದಕ್ಕೆ ವೈಲಕ್ಷಣ್ಯ ಕಾಣಬಹುದು. ಪುರುಷ ಎಂದರೆ ತನ್ನ ಯತ್ನದಿಂದ ಲಭ್ಯವಾದ ಸಕಲ ಭೋಗೋಪಕರಣಗಳನ್ನು ಮಡದಿಗೆ ಅಯತ್ನ ಲಭ್ಯವನ್ನಾಗಿ ಬಯಕೆಗಿಂತ ಮಿಗಿಲಾಗಿ ನೀಡಬಲ್ಲಪತಿ. ಇದು ಕನ್ಯಾದಾನ ಶುಲ್ಕ, ವರದಕ್ಷಿಣೆ ಅಲ್ಲ. ಸಂಪಾದಿಸಬಲ್ಲ ವ್ಯಕ್ತಿಗೆ ಪುರುಷ ಎಂದು ಹೆಸರು. ಬಯಕೆಗಿಂತ ಮಿಗಿಲಾದ ಭೋಗೋಪಕರಣಗಳ ನೀಡಿಕೆ ಪುರುಷ ಶಬ್ದಾರ್ಥ. ಇದು ಸ್ವಪ್ರಯತ್ನ ಫಲವಾಗಿ ತನ್ನದಾಗಿರಬೇಕು. ಗಿರವಿ ಪದಾರ್ಥವಲ್ಲ. ಅಂಥವನು ಸಹವಾಸಕ್ಕೆ ಅರ್ಹನು, ಶ್ರೇಷ್ಠನು, ವರ. ರಕ್ಷಣೆ ವ್ಯಾಪಾರದಲ್ಲಿ ಉಪಕರಣಗಳನ್ನೆಲ್ಲಾ ನೀಡಬಲ್ಲವನು, ಯಾವ ಸಂದರ್ಭದಲ್ಲೂ ಅವಳಿಗೆ ಅತೃಪ್ತಿ ಅಸಮಾಧಾನವಿಲ್ಲದಂತೆ, ಪರಸಹಾಯವಿಲ್ಲದಂತೆ ನಿರ್ವಹಿಸಬಲ್ಲವನು ಪುರುಷ. ಇಂಥವನು ಮನುಷ್ಯರಲ್ಲಿ ದೊರಕಬಹುದು.

ಉತ್ ಪುರುಷಃ -- ಸಾಮಾನ್ಯ ಮನುಷ್ಯನಿಗಿಂತ ಮೇಲಾದವನು. ಇವನು ದೇವತೆಯಾಗುತ್ತಾನೆ. ಹಾಗೆಂದರೆ ಮೋಕ್ಷಪಡೆದ ಭೂಲೋಕದಿ[illegible]ಕವರ ಮಪದಕ್ಕೆ ತೆರಳಿದ ಚೇತನ. ಉತ್ತರ ಪುರುಷನು ಅವನಿಗಿಂತ ಮೇಲಾದವನು. ತಾರತಮ್ಯ ಪ್ರಕಾಶಪಡಿಸುವ ಸಂದರ್ಭ ಇವನು ನಿತ್ಯಸೂರಿ. ಸಂಸಾರದ ಸೋಂಕರಿಯದವನು. ಉತ್ತಮ ಪುರುಷ -- ಎಲ್ಲರಿಗಿಂತ ಮಿಗಿಲಾದವನು. ಅವನು ತನ್ನ ಮಹಿಮೆಯನ್ನು ಪ್ರಕಾಶಪಡಿಸಿ, ಅದನ್ನು ಕಂಡು ಅತಿ ತೃಪ್ತಿಯಾಗಿ, ಕ್ಷಣವೂ ಅವನನ್ನು ಬಿಡದೆ ಇರುವ ಮಹಿಷಿ ಶ್ರೀದೇವಿ. ಮೊಟ್ಟಮೊದಲಾಗಿ ಅವನು ಈ ಭಾಗ್ಯವನ್ನೆಲ್ಲಾ ಒದಗಿಸಬಲ್ಲ ಸಮೃದ್ಧಿ ಪಡೆದವನು. ಅವನ ವೈಯಕ್ತಿಕ ಸ್ವರೂಪವು ಸರ್ವಭೋಗ್ಯವಾದುದು. ಅದು ಪೂರ್ಣತೆಯಿಂದ ಕೂಡಿದ ಆಕರ್ಷಕತೆ. ಇದು ಪುರುಷೋತ್ತಮನಲ್ಲಿ ಮೂಡಿದರೂ, ಇದರ ಅನುಭವಕ್ಕೆ ಅಧಿದೇವತೆಯಾದ ಶ್ರೀದೇವಿಯು ಕಂಡುಕೊಂಡು ಅವನನ್ನು ಸದಾ ಸೇರಿಕೊಂಡಿರುತ್ತಾಳೆ. ತತ್ಕಾರಣ ಕಾಂತತ್ವ ಸ್ವರೂಪ, ಗುಣ ಮತ್ತು ವ್ಯಾಪಾರಗಳನ್ನು ಒಳಗೊಂಡಿರುವುದರಿಂದ ಮಹಾಲಕ್ಷ್ಮಿಯ ದೃಷ್ಟಿಯಿಂದ ಅವಳಿಗೆ ತೃಪ್ತಿ ಸಂತೋಷ ಪ್ರದನಾದವನು ಪುರುಷೋತ್ತಮನು.

ಮತ್ತೊಂದು ರೀತಿಯಲ್ಲಿ ಅವಳಿಗೆ ತನ್ನ ಪೂರ್ಣತೆಯ ಪ್ರಕಟಣೆಯಿಂದ ಸದಾ ಸಂಗದ ಆಸಕ್ತಿಯನ್ನುಂಟು ಮಾಡುವವನು. ನಾರೀಣಾಂ ಉತ್ತಮ ವಧು ಶ್ರೀದೇವಿ. ನರಸಿಂಹಃ -- ನರಗಳ ಗುಂಪಿನಲ್ಲಿ ಸಿಂಹ ಸದೃಶರಾಜ ಉತ್ತಮ. ಆದ್ದರಿಂದ ಸರ್ವವಿಧದಲ್ಲೂ ಅನ್ಯೋನ್ಯ ದಾಂಪತ್ಯ, ಸಾಂಗತ್ಯ ಉಚಿತ. ಈಶ್ವರನಿಗೆ ಮನಸ್ತೃಪ್ತಿ ಉಂಟಾದಂತೆ ಶ್ರೀದೇವಿಗೂ ಆಶಾಪೂರ್ತಿ ಏರ್ಪಟ್ಟಿತು. ಪುರುಷತ್ವ ಲಕ್ಷಣ ಒಡನಾಡಿಗಳನ್ನು ಸುಖದ ನೆಪದಲ್ಲಿ ಎಂದೆಂದಿಗೂ ಉಳಿಸಿಕೊಳ್ಳಬಲ್ಲ ಶಕ್ತಿ. ಈಶ್ವರನಿಗೆ ಪ್ರೀತಿ ಭಾಜನವಾದರೆ ಅವನ ಕಾಂತೆಯ ವೈಭವದಿಂದ ಪ್ರಣವದಿಂದ ನಾವು ತಿಳಿಯ ಬಹುದಾದ ಅರ್ಥ -- ಅಕಾರ ವಾಚ್ಯನಾದವನು ಪುರುಷೋತ್ತಮ. ಮಕಾರ ವಾಚಿ ಶ್ರೀದೇವಿ. ಅಕಾರದಲ್ಲಿ ತೋರಿಬಂದ ರಕ್ಷಣ ವ್ಯಾಪಾರ, ಈಶ್ವರನ ಮನಸ್ತುಷ್ಟಿಗೆ ದ್ವಾರ ಭೂತವಾದುದು, ಮಕಾರವನ್ನು ಸಲಹುವ ರೀತಿ ಮತ್ತು ಅಕಾರದಲ್ಲಿ ಪರಿಶುದ್ಧತೆ. ಮಕಾರದಲ್ಲಿ ತೋರಿಬರುವ ಅಚಿನ್ನಿಮಿತ್ತವಾದ ದೋಷಗಳು ಕಣ್ಮರೆ. ಅದು ಕಾಣಿಸಿಕೊಳ್ಳಬೇಕಾದರೆ ಫಲ

ಹೊಂದಿದ ವ್ಯಕ್ತಿಯ ದರ್ಶನದಲ್ಲಿ. ರಕ್ಷಣೆಗಾಗಿ ಸದಾ ಈಶ್ವರನು ಕೂಡ ಇರುವನು. ಅವನ ಭೋಗವನ್ನು ಸ್ಥಿರಪಡಿಸಲು ಇವಳೂ ಸಹ ಯಾವಾಗಲೂ ಪರಿ ಶುದ್ಧಳು. ಈಶ್ವರನ ಕರ್ತವ್ಯ ರಕ್ಷಣಾವೃತ್ತಿ. ಇವಳು ಅದಕ್ಕೆ ಅನುಕೂಲವಾಗಿಯೇ ಇರುತ್ತಾಳೆ. ಇದು ದಿವ್ಯ ದಾಂಪತ್ಯ ಪ್ರಭಾವ.

ಕಾಂತನಾದ ಈಶ್ವರನಿಗೆ ಏಕೈಕಧ್ಯೇಯ ತನ್ನ ಮಹಿಷಿಗೆ, ತನ್ನ ಹಿರಿಮೆಗೆ ತಕ್ಕರೀತಿಯನ್ನು, ಸ್ಥಾನ ಮಾನವನ್ನು ಹೊಂದಿಸದೇಕೆಂಬುದು. ತಾನೂ ಅದ ರಲ್ಲಿ ಪಾಲ್ಗೊಳ್ಳುವನು. ಅಂದಮೇಲೆ ಉಭಯ ಸ್ವಾಮಿತ್ವವು ಸಹಜ. ಶ್ರೀದೇವಿಗೆ ಅನುಗ್ರಹ ಮಾಡು ವುದರಲ್ಲಿ ಎಷ್ಟು ಉಲ್ಲಾಸವಾಗುತ್ತದೋ ಭಗವಂ ತನೂ ಅದನ್ನು ಅನುಭವಿಸುತ್ತಾನೆ. ಶ್ರೀದೇವಿಯೂ, ಶ್ರೀಕಾಂತನೂ ಯಾವಾಗಲೂ ಸಂಗತ್ಯಾಗವಿಲ್ಲದ ವರು. ತತ್ಕಾರಣ ಪರಿಕರಗಳೆಲ್ಲಾ ಮಿಥುನ ಶೇಷತ್ವ ಅಂದರೆ ಶ್ರೀದೇವಿಗೂ, ಆಕೆಯ ಕಾಂತನಿಗೂ ಸೇವೆ ಸಲ್ಲಿಸುತ್ತವೆ. ಶ್ರೀದೇವಿಯು ಮಾತ್ರ ಸಂಗದ ಪ್ರಭಾ ವವರಿತು ಈಶ್ವರನಿಗೆ ಚಿರಋಣಿ. ಪುರುಷಕಾರ ಭೂತೆ ಎಂಬ ಅನುಪಮ ಸ್ವಭಾವವನ್ನು ಪ್ರಕಟಿಸಲು ಚೇತನರಲ್ಲಿ ಈಶ್ವರಾಭಿಮುಖವಾದ ಭಕ್ತಿ ಉಂಟು ಮಾಡುತ್ತಾಳೆ. ಇವಳ ಮನಸ್ಸನ್ನು ಇಟ್ಟುಕೊಂ ಡಿರುವ, ಅವಳೊಡನೆ ತಾನೂ ಅನುಭವಿಸಲು ಇಚ್ಛೆಪಡುವ ಆಕರ್ಷಕದ್ರವ್ಯ ಪುರುಷೋತ್ತಮ. ಕಃ ಶ್ರೀಃ ಶ್ರಿಯಃ -- ಎಂಬ ಆಚಾರ್ಯರ ನುಡಿಯಂತೆ ಶ್ರೀಯನ್ನು ಶ್ರೀದೇವಿಗೆ ಒದಗಿಸಿದ್ದಾನೆ. ತತ್ಕಾರಣ ಈಶ್ವರನು ಪುರುಷೋತ್ತಮನಾಗುತ್ತಾನೆ. ಅಂದರೆ ಶಾಶ್ವತ, ಪೂರ್ಣ, ನಿಜವಾದ ಉತ್ಪಾದಕ, ಪೋಷಕ, ಸಂಗಡಿಗ ಮತ್ತು ಭೋಗ ಪ್ರದಾನದಿಂದ ಭೋಗ ವನ್ನು ಅನುಭವಿಸಬಲ್ಲ ವ್ಯಕ್ತಿ. ಒಂದು ವ್ಯಕ್ತಿಯಲ್ಲಿ ಇವೆಲ್ಲವನ್ನೂ ಪ್ರಕಾಶಪಡಿಸಿರುವ ವ್ಯಕ್ತಿ ಶ್ರೀದೇವಿ. ಇದು ಪೋಷ್ಯಪೋಷಕ ಭಾವಸಂಬಂಧ. ಕಾಂತನ ಮಹಿಮೆ ಅವನ ಕಾಂತೆಯ ಮೂಲಕ ಬಹಿರಂಗ ವಾಗುತ್ತದೆ. ಶ್ರೀರಾಮಚಂದ್ರನ ವ್ರತ ಇದೇ. -- ನ ತ್ಯಜೇಯಂ ಕಥಂ ಚ ನ -- ಈ ಸಂಬಂಧ ಏರ್ಪಟ್ಟ ಮೇಲೆ ಸಂಭವಿಸುವ ಭಾಗ್ಯ ಶ್ರೇಣಿಯನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ.

ಭೋಗಕ್ಕೆ ಪ್ರಥಮವಾದ ಉಪಕರಣ ಶಯ್ಯೆ. ಫಣಿಪತಿಃಶಯ್ಯಾಆಸನಂ--ಸರ್ಪರಾಜ ಸಾಕುಮಾ ರ್ಯಕ್ಕೆ ಪಂಚವಿಧವಾದ ಸೌಕರ್ಯಗಳನ್ನು ನಿದ್ರಾ ವೇಳೆಯಲ್ಲಿ, ಎಚ್ಚೆತ್ತಿರುವಾಗ ಒದಗಿಸಬಲ್ಲ ಹಾಸಿಗೆ ಮತ್ತು ಆಸನ. ತತ್ಕಾರಣ ಇದಕ್ಕೆ ಪ್ರಥಮ ಉಪಾ ದಾನ.

ಸಂಚಾರಕ್ರಮದಲ್ಲಿ -- ವೇದಾತ್ಮಾ ವಿಹಗೇ ಶ್ವರಃ -- ಆಕಾಶದಲ್ಲಿ ಹಾರಬಲ್ಲ ಮತಂಗ ರಾಜ, ವೇದಾಕ್ಷರಮಯನಾದವನು. ಪ್ರತಿ ಅಂಶ ದಲ್ಲೂ ಶ್ರಿಯಃಪತಿಯ ಮಹಿಮೆಯನ್ನು ವೇದಾ ಕ್ಷರರೂಪದಲ್ಲಿ ಪ್ರಪಂಚದಲ್ಲೆಲ್ಲಾ ಹರಡುವುದಕ್ಕಾಗಿ ಏರ್ಪಟ್ಟ ಸಾಧನ. ಇವನು ಪಕ್ಷಿರಾಜ. ಇವನ ಮೈಯೆಲ್ಲ ವೇದಾಕ್ಷರ. ಪಕ್ಷಿಗೆ ಅನುಚಿತವಾದುದು ಯಾವುದೂ ಇಲ್ಲ.

ಯವನಿಕಾಮಾಯಾ -- ಮಾಯೆ ಎನ್ನುವುದು ಮುಸುಕು. ತಾನು ನೇರವಾಗಿ ಕಾಣಲು ಬಂದರೆ ಪ್ರಜೆಗಳು ಅವನ ಕಡೆ ತಿರುಗಿ ಸಾಧುಗಳಾಗುತ್ತಾರೆ. ಅವನ ಪರೋಕ್ಷದಲ್ಲಿ ನೋಟ ನಡತೆ ವಿಚಿತ್ರ. ಅದೇ ಸಂಸಾರ. ಪರಮಾತ್ಮನು ಅಂತರ್ಯಾಮಿ. ಇದೇ ಯವನಿಕೆ, ಅಗೋಚರತೆ, ಮಾಯಾ. ಜಗ ನ್ಮೋಹಿನೀ -- ಇದರಿಂದ ಸಂಸಾರಿಗಳಿಗೆ ದುಃಖ ವೇರ್ಪಟ್ಟರೂ ಜ್ಞಾನ ಶೂನ್ಯರಾದರೂ ಅದೇ ಸುಖ ವೆಂದು ಭ್ರಮಿಸಿ ಓಲಾಡುತ್ತಾರೆ. ಮೋಹಿನೀ -- ಅಜ್ಞಾನ ಉಂಟುಮಾಡುವ ತಾತ್ಕಾಲಿಕ ಆವರಣ.

ಬ್ರಹ್ಮೇಶಾದಿ ಸುರವ್ರಜಃ ಸದಯಿತಃ -- ಬ್ರಹ್ಮನೇ ಮೊದಲಾದ ಸಕಲ ದೇವತೆಗಳು ತಮ್ಮ ಪತ್ನಿಯ ರೊಡನಿದ್ದರೂ ಅವರಿಗೆ ಕ್ಲುಪ್ತವಾದ ಕೆಲಸಗಳನ್ನು ತೋರಿಸುತ್ತಾರೆ. ಪತಿ ಶುಶ್ರೂಷೆಯಲ್ಲಿ. ಸಹ ಪತಿ ಕರಾಗಿ ಪರಬ್ರಹ್ಮನ ಶುಶ್ರೂಷೆ. ಅವರೇ ಭಗವಂತ ನಿಗೆ ದಾಸದಾಸೀಗಣ. ವಿವಾಹ ಧರ್ಮಾರ್ಥವಾಗಿ ಸ್ತ್ರೀಪುರುಷ ಸಂಯೋಗ ಏರ್ಪಡಿಸಿದೆ. ಅದನ್ನರಿ ಯದೆ ಭೋಗ ಬಯಸಿದರೆ ಔಷಧಾಲಯವೇ ಗತಿ.

'ಶ್ರೀಃ' ಇತ್ಯೇವ ಚ ನಾಮತೇ -- ನಿನ್ನ ಹೆಸರು ಶ್ರೀ ಎಂಬುದಾಗಿಯೇ. ಈ ಶಬ್ದದಿಂದ ಸಾಂಗ ತ್ಯದ ಅಗತ್ಯ, ಪ್ರಜೆಗಳ ಕ್ಷೇಮಕ್ಕೆ ದುಡಿಮೆ. ಚೇತನ ಈಶ್ವರರ ವಿರೋಧ ವಿನಾಶ. ಇವನ್ನೆಲ್ಲ ಈಶ್ವರ ನಿಗೂ ಅರಿವಿಗೆ ತರುವುದೇ ಆಗಿರುತ್ತದೆ. ಅಂದರೆ ಶಾರೀರಕ ಭಾವನೆ ಏರ್ಪಡುತ್ತದೆ. ಭಗವತಿ -- ಇಂಥ ಮಂಗಳ ಗುಣಗಳುಳ್ಳವಳು. ಪ್ರಣವದ ಮಧ್ಯ ಮಾಕ್ಷರದ ಪ್ರಯೋಜನವನ್ನು ಕೈಬಿಡದೆ ಪ್ರಥಮ ಚರಮಾಕ್ಷರ ಉಳಿಸಿಕೊಳ್ಳುವುದೇ ಅವನ ಪ್ರಧಾನ ಸಹಜ ಕೃತ್ಯ. ಅನೇಕ ಉಪಕಾರರೂಪದಲ್ಲಿ ಪರಿಣಮಿಸುವ ಅವಳ ಮನೋ ದೃಷ್ಟಿ, ನಿಷ್ಠೆ, ಕೃತ್ಯ ವನ್ನು ತಿಳಿಗೇಡಿಗಳಾದ ನಾವು ಬ್ರೂಮಃ ಕಥಂ -- ಏನೆಂದು ಹೇಳುವುದು. ಸಮಸ್ತ ಲೋಕಕ್ಕೂ, ಸ್ವತಃ ಅರಿಯಲಾರದ ಅಪ್ರಮೇಯವಾದ, ಈಶ್ವರನಿಗೂ ಸಂತೋಷ ಜನಕವಾದ ಗುಣಗಳು ಕಾಣುವುದ ರಿಂದ ಧರ್ಮಾಚರಣೆ ಮತ್ತು ಭಗವಂತನು ಇಳಿ ಯಲು ಶ್ರೀದೇವಿಯ ಸಾಂಗತ್ಯವು ಕಾರಣ ಎಂದು ಯಾಮುನಾಚಾರ್ಯರು ಈ ಶ್ಲೋಕದಲ್ಲಿ ಸ್ತುತಿಸಿ ದ್ದಾರೆ.

ಯಸ್ಯಾಃ ತೇ ಮಹಿಮಾನಮ್<br>
ಆತ್ಮನ ಇವ, ತ್ವದ್ ವಲ್ಲಭೋಪಿ ಪ್ರಭುಃ<br>
ನಾಲಂ ಮಾತುಮ್ ಇಯತ್ತಯಾ<br>
ನಿರವಧಿಂ ನಿತ್ಯಾನುಕೂಲಂ ಸ್ವತಃ<br>
ತಾಂ ತ್ವಾಂ ದಾಸ ಇತಿ,<br>
ಪ್ರಪನ್ನ ಇತಿ ಚ ಸ್ತೋಷ್ಯಾಮ್ಯಹಂ ನಿರ್ಭಯಃ<br>
ಲೋಕೈಕೇಶ್ವರಿ ! ಲೋಕನಾಥದಯಿತೇ!<br>
ದಾಂತೇ ದಯಾಂ ತೇ ವಿದ್ಧ

ಸ್ವತಃ ಯಾವಾಗಲೂ ಅನುಕೂಲವಾಗಿಯೇ ಇರುವ ನಿನ್ನ ಮಹಿಮೆಗೆ ಎಲ್ಲೆಕಟ್ಟು ಇಲ್ಲವೇ ಇಲ್ಲ. ಆ ನಿನ್ನ ಮಹಿಮೆಯನ್ನು ಪ್ರಭುವಾದ ನಾರಾ ಯಣನೂ -- ಆತ ನಿನ್ನ ವಲ್ಲಭನೇ ಆಗಿದ್ದರೂ -- ತನ್ನ ಮಹಿಮೆಯನ್ನು ಹೇಗೋ ಹಾಗೆ, ಇಷ್ಟೇ ಎಂದು ಅಳೆಯಲು ಸಮರ್ಥನಾಗಿಲ್ಲ. ಇಂತಹ ನಿನ್ನನ್ನು, ಎಲೈ ಲೋಕೈಕೇಶ್ವರಿಯೇ! ಲೋಕನಾಥ ಪ್ರಿಯಳೇ! ಮೃದುಸ್ವಭಾವವುಳ್ಳವಳೇ! ನಿನ್ನ ದಯೆ ಯನ್ನು ಮನಗಂಡವನಾಗಿ, 'ನಾನು ನಿನ್ನ ದಾಸ', 'ನಾನು ನಿನ್ನ ಶರಣಾಗತ' ಎಂಬುದಾಗಿ ಸ್ವಲ್ಪವೂ ಭಯವಿಲ್ಲ ದವನಾಗಿ ಸ್ತೋತ್ರಮಾಡುವೆನು.

ವಿಶೇಷಾರ್ಥ :-- ಒಂದು ಮಿಥುನವು ಶಾಸ್ತ್ರದಲ್ಲಿ ಪರಿಗಣಿತವಾದ ತತ್ತ್ವ. ಅದು ಸ್ತ್ರೀ ಪುಂರೂಪ ವಾಗಿದೆ. ಆಜ್ಞಾಪನವು ಪುಂ ವ್ಯಕ್ತಿಗೆ ಸೇರಿದುದು. ಸ್ತ್ರೀ ವ್ಯಕ್ತಿಯ ಕರ್ತವ್ಯ ಹೆದರಿಕೆಯನ್ನು ಹೋಗ ಲಾಡಿಸಿ ಪ್ರಜೆಗಳಿಗೆ ವಿವೇಕವನ್ನು ದಾಸ್ಯಭಾವ ವನ್ನು, ಸ್ವರೂಪವನ್ನು ತೋರಿಸಿಕೊಡುವುದು. ಈ ದಾಂಪತ್ಯ ಕೃತ್ಯವು ಇಬ್ಬರಿಗೂ ಹಂಚಿಕೆಯಾದು ದಲ್ಲ. ಚೇತನನು ಪ್ರಕೃತಿ ಸಂಸರ್ಗದಿಂದ ಮತಿ ಗೆಟ್ಟು, ಗತಿಗೆಟ್ಟು ಅಸತ್ಸಂಗವೇ ಆದರಣೀಯವೆಂಬ ನಿಲುವನ್ನು ಹೊಂದಿ ಘೋರ ಅನುಭವವನ್ನು ಪಡೆ ಯುತ್ತಾನೆ. ಪರಮಾತ್ಮನ ಔದಾಸೀನ್ಯದಿಂದ ಸ್ವರೂ ಪಕ್ಕೆ ಅನರ್ಹವಾದ ಸ್ವಾತಂತ್ರ್ಯ ಪಡೆದು, ತತ್ಫಲವಾಗಿ ಅಸದ್ವೃತ್ತಿಯಲ್ಲಿ ಮುಳುಗಿ ನಾನಾವಿಧವಾದ ಶಿಕ್ಷೆ ಗಳಿಗೆ ಒಳಪಡುತ್ತಾನೆ. ಈ ಅಂಶವನ್ನು ಶ್ರೀದೇ ವಿಯು ಪರಮಾತ್ಮನ ಗಮನಕ್ಕೆ ತಂದು, ಅಸಡ್ಡೆಯ ಫಲವಾದ ಅನರ್ಥವನ್ನು ತಪ್ಪಿಸಲು ಸಂಬಂಧವು ಮುಖ್ಯಕಾರಣ, ಆತ್ಮವೈರಾಗ್ಯವಲ್ಲ. ತನ್ನ ವಶದಲ್ಲೇ ಇರುವ ಚೇತನವರ್ಗವು ತಪ್ಪುಮಾರ್ಗಕ್ಕೆ ಹೋಗಲು ಅವಕಾಶ ನೀಡಿದುದು ಭಗವಂತನ ಗುಣಪೂ ರ್ತಿಗೆ ಲೋಪ ಏರ್ಪಡುತ್ತದೆ. ಅವನ ಕರುಣೆಗೆ ಅವಕಾಶವೇ ಇಲ್ಲ. ಇಲ್ಲಿ ಭಗವಂತನ ಅಸಡ್ಡೆ ಯಿಂದ ಅನರ್ಥ. ಪರದೋಷ ನಿವಾರಣೆ ನಿಜ ವಾದ ನಿವಾರಣೆ. ಈ ದುಃಖ ಅಥವಾ ದೋಷಕ್ಕೆ ಕಾರಣ ಯಾರೋ ಅವನು ನಿಂದೆಗೆ ತುತ್ತಾಗಬೇಕು.

ತನ್ನಿಂದ ಈ ದುಃಖವೇರ್ಪಟ್ಟ ಕಾರಣ ಮೂಲ ಅಪ ರಾಧ ತನ್ನದು ಎಂಬ ಭಾವನೆ ದಯಾಮಯನಲ್ಲಿ ಹುಟ್ಟಬೇಕು.

ರಾಮಾಯಣದಲ್ಲಿ ಇದು ಸುವ್ಯಕ್ತವಾಗಿದೆ. ರಾಮಚಂದ್ರನು ತನ್ನ ಪ್ರಜೆಗಳಲ್ಲಿ ದುಃಖವೇರ್ಪ ಟ್ಟುದನ್ನು ಕೇಳಿದ ಕೂಡಲೇ ತಾನು ಬಹಳ ಖಿನ್ನ ನಾಗುತ್ತಾನೆ. ಕಾರಣ, ತನ್ನ ಕರ್ತವ್ಯದಲ್ಲಿ ಅಸಡ್ಡೆ. ಇದೇ ಪರದುಃಖ ಅಸಹಿಷ್ಣುತ್ವ. ಒಬ್ಬ ಗಣ್ಯವ್ಯಕ್ತಿಗೆ ಅತಿನಿಹೀತ ಸಂತಾನ ಏರ್ಪಟ್ಟರೆ ಅದು ಸಂತಾನ ದೋಷವಲ್ಲ. ತಜ್ಜನಕನಾದ ಇವನ ಧರ್ಮನಿಷ್ಠೆ ಯಲ್ಲಿ ಏರ್ಪಟ್ಟ ದೋಷ. ತನ್ನ ಕಾರ್ಯವನ್ನು ಶಿಶು ವಿನ ಮೇಲೆ ಹೊರಿಸಿ ಅದನ್ನು ಶಿಕ್ಷೆಗೆ ಗುರಿಪಡಿಸು ವುದು ಅವಿವೇಕ. ಅನಿಷ್ಟೆಯಿಂದ ಅಕ್ರಮ. ಈ ದೃಷ್ಟಿಯಿಂದ ಪತ್ನಿ ಸಹವಾಸ ಅವಶ್ಯಕ. ನಡತೆಯಲ್ಲಿ ನ್ಯೂನತೆ ಉಂಟಾದರೆ ಭಗವಂತನು ಒಂದು ಉಪಾ ಯವನ್ನು ಕಂಡುಹಿಡಿದ. ಅದು ಲೀಲಾ. ಇಚ್ಛಾ ಪೂರ್ವಕವಾಗಿ ಶಿಶುಗಳನ್ನು ತೊಂದರೆಗೆ ಸಿಕ್ಕಿಹಾಕಿಸಿ ಆಪತ್ತು ಒದಗಿದಾಗ ರಕ್ಷಿಸುವ ಕರ್ತವ್ಯ ಮಾಡು ತ್ತಾನೆ. ನಡತೆಯ ನಾಶಕ್ಕೆ ಚೇತನನಿಗೆ ಅಧಿಕಾರ; ಅದರಿಂದ ದುಷ್ಪರಿಣಾಮಕ್ಕೆ ದಾರಿ, ಶಿಕ್ಷೆ ಚೇತನನ ಉದ್ಧಾರಕ್ಕೆ ಸಂಬಂಧವೇ ಕಾರಣ. ಆಗುಹೋಗು ಗಳು ಈಶ್ವರ ಸಂಕಲ್ಪ. ಈ ಭಾವನೆಯು ಶ್ರೀದೇ ವಿಯ ಸಂಪರ್ಕದ ಫಲ. ಜೀವಾತ್ಮನು ಕಿಂಕರ. ಕೈಂಕ ರ್ಯವು ಈಶೇಶಿ ತತ್ವ ಸಂಬಂಧದ ಪ್ರಭಾವ. ಅಂದ ಮೇಲೆ ಭಗವಂತನಿಗೆ ಜೀವಾತ್ಮನು ಸರ್ವದಾ ಒಡ ನಾಡಿಯಾದ ಸೇವಕನಾಗುತ್ತಾನೆ. ಚೇತನನಲ್ಲಿರುವ ಅಹಂ ಈಶ್ವರನ ಅಹಂ ಶಬ್ದಕ್ಕೆ ಶರೀರದಂತೆ ಅಡಿ ಯಾಳಾಗುತ್ತದೆ.

ಹಿಂದಿನ ಶ್ಲೋಕದಲ್ಲಿ ಹೇಳಿರುವ ಮಹಿಮೆ ಯನ್ನು ತನ್ನ ಮಹಿಮೆಯಂತೆ, ಎಲ್ಲದಕ್ಕು ಯಜ ಮಾನನಾಗಿದ್ದರೂ ಎಲ್ಲೆಯನ್ನು ಅರಿಯಲಾರ. ಈ ಮಹಿಮೆಯು ನಿತ್ಯವೂ ಅನುಕೂಲಕರವಾಗಿಯೇ ಇರುತ್ತದೆ. ಅಂತಹ ಹಿರಿಮೆಯುಳ್ಳ ಶ್ರೀದೇವಿಯು ತನ್ನನ್ನು ಅವಳ ಸೇವೆಗೆ ಒಳಪಟ್ಟವನು -- ದಾಸ -- ಎಂದು ನಡೆಸಿಕೊಳ್ಳುವ ಸರ್ವಭಾರವನ್ನು ಅವಳ ಮೇಲೆ ಹಾಕಿ ಆಚಾರ್ಯರು ಮೊರೆಯಿಡುತ್ತಾರೆ.

ಇದರಲ್ಲಿ ಹೆದರಿಕೆ ಇಲ್ಲ. ಕಾರಣ ಅವಳು ಲೋಕೈಕೇಶ್ವರಿ ಅಂದರೆ ಚೇತನವರ್ಗದಲ್ಲಿ ಒಬ್ಬಳೇ ಒಬ್ಬಳು. ಈ ಸಾಮರ್ಥ್ಯವನ್ನು ಪಡೆದ ವಳು. ಕಾರಣ, ಲೋಕನಾಥನ ಮೆಚ್ಚಿಗೆಗೆ ಪಾತ್ರ ಳಾಗಿ ಪ್ರಿಯತಮಳಾದ ವ್ಯಕ್ತಿ ಆಗಿದ್ದಾಳೆ ಅವಳು ಹಿಂಸೆಗೆ ಒಳಪಡಿಸದ ಆತ್ಮ ಸಂಯಮವುಳ್ಳವಳು.

ಇಂತಹ ಅವಳ ದಯೆಯನ್ನು ಚೆನ್ನಾಗಿ ಅರಿತಿರುವು ದರಿಂದ ತತ್ಫಲವಾಗಿ ಎದೆಗುಂದದೆ -- ಅವಳನ್ನು ಬಿಟ್ಟು ಈಶ್ವರನಲ್ಲಿ ಮೊರೆಯಿಡಲಾರರು. ಏಕೆಂ ದರೆ ಅವನಲ್ಲಿ ಈಶ್ವರತ್ವ ಮಾತ್ರ ಬಳಕೆಗೆ ಬಂದರೆ ಯಾರಿಗೂ ಉಳಿಗಾಲವಿಲ್ಲ. ದಯಾಧೀನ ಸರ್ವೇ ಶ್ವರತ್ವವು ಈಶ್ವರನ ಸ್ವರೂಪ. ಆದ್ದರಿಂದ ಆಚಾ ರ್ಯರು ಶ್ರೀದೇವಿಯ ಬಳಿ ಬಂದಿದ್ದಾರೆ.

ಈಷತ್ ತ್ವತ್ಕರುಣಾ ನಿರೀಕ್ಷಣ
ಸುಧಾ ಸಂಧುಕ್ಷಣಾತ್ ರಕ್ಷ್ಯತೇ
ನಷ್ಟಂ ಪ್ರಾಕ್ ತದಲಾಭತಃ
ತ್ರಿಭುವನಂ ಸಂಪ್ರತಿ ಅನನ್ತೋದಯಂ
ಶ್ರೇಯೋ ನ ಹಿ ಅರವಿಂದಲೋಚನ
ಮನಃಕಾಂತಾ ಪ್ರಸಾದಾತ್ ಋತೇ
ಸಂಸೃತಿ ಅಕ್ಷರ ವೈಷ್ಣವಾಧ್ವಸು
ನೃಣಾಂ ಸಂಭಾವ್ಯತೇ ಕರ್ಹಿಚಿತ್

ತತ್ಕ್ಷಣ ಫಲಕೊಡುವ ನಿನ್ನ ಕೃಪಾಕಟಾಕ್ಷವೀಕ್ಷ ಣವೆಂಬ ಅಮೃತದ ಸ್ವಲ್ಪಮಾತ್ರ ಹೊರಹೊಮ್ಮು ವಿಕೆಯಿಂದಲೇ ಮೂರು ಲೋಕಗಳೂ, ಇದಕ್ಕೆ ಮುಂಚೆ ಅದರ ಲಾಭವಿಲ್ಲದೆ ನಷ್ಟಹೊಂದಿದ್ದು, ಈಗ ಅದನ್ನು ಪಡೆದು ಅನಂತವಾದ ಐಶ್ವರ್ಯ ಗಳ ಉದಯವುಳ್ಳವುಗಳಾಗಿ ರಕ್ಷಿಸಲ್ಪಡುತ್ತಿವೆ. ಅರ ವಿಂದಲೋಚನನಾದ ನಾರಾಯಣನ ಮನೋವ ಲ್ಲಭೆಯಾದ ನಿನ್ನ ಅನುಗ್ರಹವಿಲ್ಲದಿದ್ದರೆ, ಸಂಸಾ ರಮಾರ್ಗದಲ್ಲಾಗಲೀ, ಕೈವಲ್ಯಾನುಭವದಲ್ಲಾಗಲೀ, ಪರಮ ಪದ ಪ್ರಾಪ್ತಿಯಲ್ಲಾಗಲೀ, ಎಲ್ಲೂ, ಜನರಿಗೆ ಶ್ರೇಯಸ್ಸು ಉಂಟಾಗುವುದೇ ಇಲ್ಲವಲ್ಲವೇ!

ವಿಶೇಷಾರ್ಥ:-- ಎಲ್ಲವೂ ಈಶ್ವರಾಧೀನವೆಂದು ತಿಳಿದು ಬಂದರೂ ತತ್ ಜ್ಞಾನಾನುಗುಣವಾಗಿ ತಮ್ಮ ಸ್ವರೂಪ ನಡತೆಯನ್ನು ಉಳಿಸಿಕೊಳ್ಳುವರು ಅತಿ ವಿರಳ. ಆಳ್ವಾರರಲ್ಲಿ ಇಬ್ಬರು ಇಂಥ ಜ್ಞಾನವನ್ನು ಪಡೆಯದಿರಲು, ಈಶ್ವರನ ಕಣ್ಣಿಗೆ ಬೀಳದಿರುವ ಪಾಪಿ ತಾನು ಎಂದು ನಿಂದಿಸಿಕೊಂಡರೆ, ಮತ್ತೊ ಬ್ಬರು ತಾವು ಪಾಪವನ್ನೇ ಎಸಗಿದರೂ ಅದರಿಂದ ಪಾರುಮಾಡದಿರುವ ಕಾರಣ, ಈಶ್ವರನು ಖಂಡಿ ತವಾಗಿಯೂ ಸರ್ವೇಶ್ವರನಲ್ಲ ಎಂದು ದೋಷಾ ರೋಪಣೆ ಮಾಡಿ, ತನಗೆ ಮೋಕ್ಷಸಿದ್ಧವಾಗದಿರಲು ಕಾರಣ ಈಶ್ವರನಲ್ಲಿ ಜ್ಞಾನ, ಶಕ್ತಿ, ಸಾಮರ್ಥ್ಯಪೂರ್ಣ ವಾಗಿಲ್ಲ. ಆದ್ದರಿಂದ ಅವನು ದೇವತಾಂತರ ವರ್ಗಕ್ಕೆ ಸೇರಬೇಕಾದವನೆಂದು ಹೇಳಿದ್ದಾರೆ. ಇದು ನಿರೀಶ್ವ ರವಾದ ದೆದರಿಕೆ. ಆದ್ದರಿಂದ ಚೇತನನಿಗೆ ಮೋಕ್ಷ ಕೊಡದೆ ಹೋದರೆ ಈಶ್ವರ ಶಬ್ದಕ್ಕೆ ಅಧಿಕಾರವಿಲ್ಲ. ಇವೆರಡು ಭಾವನೆಗಳು ಪರಾಂಕುಶ ಮತ್ತು ಪರಕಾ ಲರ ಮೂಲಕ ತಿಳಿದುಬರುತ್ತವೆ.

ಈಶ್ವರನು ಸರ್ವೇಶ್ವರನಾದಂತೆ ಅವನ ಪತ್ನಿ ಯಾದ ಶ್ರೀದೇವಿಯು ಸರ್ವೇಶ್ವರಿ. ಈಗ ಇದು ಕಾಂತಾಸ್ತೋತ್ರವೇ ವಿನಾ ಕಾಂತಸ್ತೋತ್ರವಲ್ಲ. ಈಶ್ವ ರನು ಒಲಿದಿರುವ ವ್ಯಕ್ತಿಯ ಮಾತಿಗೆ ಅಗತ್ಯ ವಾಗಿ ಗೌರವ ಸಲ್ಲಿಸಬೇಕಾದ್ದು ಅವಳಿಗೂ ಸ್ವಾಮಿ ಯಾದ ಈಶ್ವರನ ಕರ್ತವ್ಯ. ಅವರು ಧರ್ಮದೇವತೆ ಎಂಬ ಭಾವನೆಯನ್ನು ಸೂಚಿಸಲು ಪತಿಪತ್ನಿಯಾ ಗಿರುವುದು. ದಂಪತೀ ಜಗದಾಂಪತಿ ಎಂದಿದ್ದಾರೆ ವೇದಾಂತದೇಶಿಕರು. ಶ್ರೀದೇವಿಯು ಪರಮಾತ್ಮ ನೊಡನೆ ಸೇರಲು ಯಾವ ವ್ರತವನ್ನೂ ಮಾಡಲಿಲ್ಲ. ಈಶ್ವರನನ್ನು ಕಂಡಕೂಡಲೇ ಅವನಲ್ಲಿ ಉದ್ಭವಿಸಿದ ಸಂಗಮೇಚ್ಛೆ ಅವಳ ಪಾಲಿನದಲ್ಲ. ಆಕರ್ಷ ಅಂಗೀ ಕಾರ, ಅದರ ನಿತ್ಯತೆ ಎಲ್ಲವೂ ಭಗವಂತನ ಪಾಲಾ ಯಿತು. ಅವಳು ಚೇತನ ಮತ್ತು ಈಶ್ವರನ ಸಂಬಂ ಧವನ್ನು ಅರಿತವಳು.

ಸಕಲ ಜಗತ್ತು ಶ್ರೀದೇವಿಯ ಕರುಣೆ. ಜನರ ದುಃಖಾದರ್ಶನ ಸ್ವನಿಷ್ಠ ಸ್ಮರಣೆ. ಅದೇ ಕಾರುಣ್ಯ ಈ ಭಾವನೆಯಿಂದ ಯಾರನ್ನು ಕಾಣುತ್ತಾಳೆಯೋ, ಅದರ ಪ್ರೋಕ್ಷಣೆಯಿಂದ ಜಗತ್ತಿನ ಪರಿಪಾಲನೆ, ಇದೇ ಲಕ್ಷ್ಮೀಕಟಾಕ್ಷ, ಇದು ಅತಿಹಿತಕರ, ಆನಂ ದಕರ. ಈಕೆಯ ಕೈವಾಡದಿಂದ ಶ್ರೀಮನ್ನಾರಾಯ ಣನ ವ್ಯಾಪಾರವೆಲ್ಲ ಎಲ್ಲೆ ಮೀರಿದ ಆನಂದಮಯ ಚೇತನನಿಗೆ ಉಳಿದಿರುವುದು ಕೈಂಕರ್ಯ. ಇದ ರಿಂದ ಪರಕಾರುಣ್ಯ ಲಕ್ಷ್ಮೀದೇವಿಯ ಸಾಂಗತ್ಯ ಫಲ. ನಾರಾಯಣನು ಭಗವಂತನಾಗುತ್ತಾನೆ. ಶ್ರೀದೇ ವಿಯು ಭಗವತಿ. ಅವಳ ಅನುಗ್ರಹವಿಲ್ಲದೆ ಉಳಿ ಗಾಲವಿಲ್ಲ. ಲಕ್ಷ್ಮಿಯನ್ನು ಆಶ್ರಯಿಸಿದರೆ ಸಂಬಂಧ ಮುಂದಿಟ್ಟು ನೆರವು ನೀಡುತ್ತಾಳೆ. ಮೋಕ್ಷವು ಲಕ್ಷ್ಮೀ ಪೂರ್ವಕವಾದರೆ ಸದ್ಯಃ ಈಗಲೇ ಇಲ್ಲೇ ಏರ್ಪ ಡಬಹುದು. ಅಂದರೆ ಅನುಭವ ಬದಲಾಯಿಸಬ. ಹುದು.

ಶಾಂತಾನಂತ ಮಹಾವಿಭೂತಿ
ಪರಮಂ ಯದ್ ಬ್ರಹ್ಮರೂಪಂ ಹರೇಃ
ಮೂರ್ತಂ ಬ್ರಹ್ಮತತೋಪಿ ತತ್
ಪ್ರಿಯತರಂ ರೂಪಂ ಯದ್ ಅತ್ಯದ್ಭುತಮ್
ಯಾನಿ ಅನ್ಯಾನಿ ಯಥಾ ಸುಖಂ
ವಿಹರತಃ ರೂಪಾಣಿ ಸರ್ವಾಣಿ ತಾನಿ,
ಆಹುಃ ಸ್ವೈಃ ಅನುರೂಪ
ರೂಪ ವಿಭವೈಃ ಗಾಢೋಪಗೂಢಾನಿತೇ

ಶ್ರೀಹರಿಯ 'ಬ್ರಹ್ಮ' ರೂಪವು ಶಾಂತವೂ, ಅನಂ ತವೂ, ಮಹಾವಿಭೂತಿಯುಳ್ಳದ್ದೂ, ಉತ್ಕೃಷ್ಟವೂ ಆದುದು. ಆದರೆ ದಿವ್ಯಾವಯವಗಳಿಂದ ಕೂಡಿ ಅತ್ಯದ್ಭುತವಾಗಿರುವ ಮೂರ್ತರೂಪವೇ ಆ ಶ್ರೀಹ

ರಿಗೆ ಹೆಚ್ಚುಪ್ರಿಯವಾದುದು. ಈ ರೂಪಗಳೂ ಮತ್ತು ಆತ ಯಥಾಸುಖವಾಗಿ ವಿಹರಿಸುವ ಇತರ ಬೇರೆ ಬೇರೆ ಅವತಾರ ರೂಪಗಳೂ ಎಲ್ಲವೂ, ಆತ ನಿಗೆ ಅನುರೂಪವಾದ ನಿನ್ನ ರೂಪ ಮತ್ತು ವಿಭವ ಗಳಿಂದ ದೃಢವಾಗಿ ಕೂಡಿಕೊಂಡಿರುವುವು ಎಂದು ಬಲ್ಲವರು ಹೇಳುತ್ತಾರೆ.

ವಿಶೇಷಾರ್ಥ :-- ಆನಂದಕ್ಕೆ ಅಪೇಕ್ಷಿತ ಸಾಮಗ್ರಿ ಐಶ್ವರ್ಯ. ಅದು ಅತ್ಯುತ್ತಮವಾದ ಶಾಶ್ವತ ವಾದ ಅವಸ್ಥೆ. ಇದರಲ್ಲಿ ಕಳವಳಕ್ಕೆ ಕಾರಣವಿಲ್ಲ ಮತ್ತು ಅನುಭವಕ್ಕೆ ಮಿತಿ ಇಲ್ಲ. ಇದು ಮಹಾ ವಿಭೂತಿ, ಇದು ಹರಿಯ ಬೃಹತ್ತದ ಸ್ವರೂಪ. ಇದು ಏಕರೂಪಸಾಗರದಂತೆ ಇರುವ ನಿತ್ಯಾವಸ್ಥೆ. ಇದು ಪರಮಪದ. ಇದೇ ಪರಬ್ರಹ್ಮನ ಮುಗಿಲು ಮಟ್ಟದ ಸ್ವರೂಪ, ಸ್ವಭಾವ. ಆ ಹರಿಯ ಇತರ ರಿಗೆ ಗೋಚರವಾಗಬಲ್ಲ ರೂಪವು ಹಿಂದೆ ಕಂಡದ್ದ ಕ್ಕಿಂತ ಸಂತೋಷ ಉಂಟುಮಾಡಬಲ್ಲುದು. ಈ ರೂಪಾವಸ್ಥೆಯು ಅದ್ಭುತವಾದುದು. ಅವನು ತನ್ನ ಇಚ್ಛಾನುಸಾರ ವಿಹರಿಸಲು ಅವತಾರಗಳ ಮೂಲಕ ರೂಪಾಂತರ ತಾಳುತ್ತಾನೆ. ಅವು ಸನ್ನಿವೇಶಕ್ಕೆ ಅನು ಗುಣವಾದ ವೇಷಗಳು. ಅನೇಕವಿಧವಾದ ಸ್ಥಾವರ ಜಂಗಮರೂಪದಲ್ಲಿ ಈಶ್ವರನು ಪ್ರಕಟಿಸುವ ಬಗೆ ಇದು. ಎಲ್ಲವೂ ಲಕ್ಷ್ಮೀನಾರಾಯಣರ ಸಂಬಂಧ ವನ್ನೇ ತೋರಿಸುತ್ತವೆ. ವಿಷ್ಣುವಿನ ಅವತಾರರೂಪಕ್ಕೆ ಹೊಂದಿಕೊಳ್ಳಬಲ್ಲ ವೇಷಗಳನ್ನು ತಾಳಿ ತನ್ಮೂಲಕ ಅವನ ಮಹಿಷಿಯ, ಅವನನ್ನು ಬಿಡದೆ ಅಂಟಿಕೊಂ ಡಿರುವ ಸ್ವಭಾವವನ್ನು, ಕಾಂತಕಾಂತೆಯರ ಸಾಂಗ ತ್ಯವನ್ನು ತೋರಿಸುತ್ತವೆ. ಶ್ರೀದೇವಿ ಇಲ್ಲದೆ ಭಗ ವಂತನಿಲ್ಲ. ಭಗವಂತನಿಲ್ಲದೆ ಶ್ರೀದೇವಿ ಇಲ್ಲ. ಜಗತ್ತು ಸ್ವರೂಪತಃ ಪರಮಾತ್ಮನಲ್ಲ. ಅವನಿಲ್ಲದೆ ಅದು ಉಳಿಯಲಾರದು. ಕಾರಣ ಜಗತ್ತಿಗೂ ಪರ ಮಾತ್ಮನಿಗೂ ಏರ್ಪಟ್ಟಿರುವ ಸಂಬಂಧ. ಭಗವಂ ತನು ಜೀವರಾಶಿಯ ನಪ್ಪ ಪಿತೃಕನಲ್ಲ. ಅವಳು ಇದನ್ನು ಬಯಸಲಾರಳು. ಪರಸ್ಪರಕಾಂತತೆ ಏರ್ಪ ಟ್ಟಿರುವುದಕ್ಕೆ ಕಾಂತಾಸ್ತೋತ್ರವೆಂಬ ಹೆಸರು ಸಮುಚಿ ತವಾಗಿದೆ. ಈ ಸಂಗವು ಕಾಂತತೆಯನ್ನು ಎಂದಿಗೂ ಕುಂದಿಗೆ ಒಳಪಡಿಸುವುದಿಲ್ಲ. ಈ ಶ್ಲೋಕದಲ್ಲಿ ಲಕ್ಷ್ಮೀನಾರಾಯಣರ ನಿತ್ಯ ಸಹಯೋಗ, ಸಂಬಂಧ ಗಳು ಯಾವ ಸನ್ನಿವೇಶದಲ್ಲೂ ಏಕರೂಪವಾಗಿರು ತ್ತವೆ ಎಂಬ ತತ್ತ್ವಾರ್ಥವು ತೋರುತ್ತದೆ.

ಆಕಾರತ್ರಯ ಸಂಪನ್ನಾಮ್
ಅರವಿನ್ದ ನಿವಾಸಿನೀಮ್
ಅಶೇಷ ಜಗತ್ ಈಶಿತ್ರೀಂ
ವನ್ದೇ ವರದವಲ್ಲಭಾಮ್

ಉಪಾಯತ್ವ ಉಪೇಯತ್ವ ಪುರುಷಕಾರತ್ವ ಎಂಬ ಮೂರು ಆಕಾರಗಳಿಂದ ಕೂಡಿದವಳೂ, ಅರವಿಂದ ನಿವಾಸಿನಿಯೂ, ವರಪ್ರದನಾದ ವಿಷ್ಣು ವಿನ ವಲ್ಲಭೆಯೂ ಆದ ಅಶೇಷ ಜಗತ್ ಸ್ವಾಮಿ ನಿಯೂ ಆದ ಲಕ್ಷ್ಮಿಗೆ ನಮಸ್ಕರಿಸುತ್ತೇನೆ.

ಚತುಃಶ್ಲೋಕೀ ಎಂಬ ಈ ಸ್ತೋತ್ರದಲ್ಲಿ ನಾಲ್ಕೇ ಶ್ಲೋಕಗಳಿವೆ. ಆದರೆ ಇದನ್ನು ಪಠಿಸುವಾಗ ಲಕ್ಷ್ಮೀ ಸ್ತುತಿ ರೂಪವಾದ ರಾಮಾನುಜಾಚಾರ್ಯರ ಶರ ಣಾಗತಿ ಗದ್ಯದ ಒಂದು ಭಾಗ, ಪರಾಶರ ಭಟ್ಟರ ಗುಣರತ್ನಕೋಶದ ಒಂದು ಶ್ಲೋಕ ಮತ್ತು ವೇದಾಂ ತದೇಶಿಕರ ಶ್ರೀಸ್ತುತಿಯಿಂದ ಒಂದು ಶ್ಲೋಕವನ್ನು ಪಠಿಸುವುದು ರೂಢಿ. ಅವು ಹೀಗಿವೆ--

ಭಗವನ್ನಾರಾಯಣ ಅಭಿಮತ ಅನುರೂಪ ಸ್ವರೂಪ ರೂಪ ಗುಣ ವಿಭವ ಐಶ್ವರ್ಯ ಶೀಲಾದಿ ಅನವಧಿಕಾತಿಶಯ ಅಸಂಖ್ಯೇಯ ಕಲ್ಯಾಣ ಗುಣ ಗಣಾಂ, ಪದ್ಮವನ ಆಲಯಾಂ, ಭಗವತೀಂ, ಶ್ರಿಯಂ, ದೇವೀಂ, ನಿತ್ಯ ಅನಪಾಯಿನೀಂ, ನಿರ ವದ್ಯಾಂ, ದೇವದೇವ ದಿವ್ಯಮಹಿಷೀಂ, ಅಖಿಲ ಜಗನ್ಮಾತರಂ, ಅಸ್ಮತ್ ಮಾತರಮ್, ಅಶರಣ್ಯ ಶರಣ್ಯಾಮ್, ಅನನ್ಯ ಶರಣಃ ಶರಣಮ್ ಅಹಂ ಪ್ರಪದ್ಯೇ--

ಭಗವಂತನಾದ ನಾರಾಯಣನಿಗೆ ಇಷ್ಟವೂ, ಒಪ್ಪುತಕ್ಕವೂ ಆದ ಸ್ವರೂಪ, ರೂಪ, ಗುಣ, ವಿಭವ, ಐಶ್ವರ್ಯ, ಶೀಲ ಮೊದಲಾದ ಕೊನೆಯಿಲ್ಲದ ಅತಿ ಶಯವುಳ್ಳ, ಲೆಕ್ಕಮಾಡಲಾಗದ ಕಲ್ಯಾಣಗುಣಗಳ ಸಮೂಹವುಳ್ಳ ನೀನು ಭಗವತಿ ಶ್ರೀದೇವಿ; ತಾವರೆ ವನವನ್ನೇ ಮನೆಮಾಡಿಕೊಂಡಿರುವವಳು; ವಿಷ್ಣುವ ನ್ನೆಂದೂ ಬಿಟ್ಟಿರದವಳು; ಸ್ವಲ್ಪವೂ ದೋಷವಿಲ್ಲದ ವಳು; ದೇವದೇವ ನಾರಾಯಣನ ದಿವ್ಯಮಹಿಷಿ; ಜಗತ್ತೆಲ್ಲಕ್ಕೂ ತಾಯಿ; ನನ್ನ ತಾಯಿ; ರಕ್ಷಕರಿಲ್ಲದವ ರಿಗೆ ರಕ್ಷಕಳು; -- ಇಂತಹ ನಿನ್ನನ್ನು, ಬೇರೆ ರಕ್ಷಕರಿ ಲ್ಲದ ನಾನು ಶರಣುಹೊಂದುತ್ತೇನೆ. (ಶರಣಾಗತಿ ಗದ್ಯ)

ಉಲ್ಲಾಸ ಪಲ್ಲವಿತ
ಪಾಲಿತ ಸಪ್ತಲೋಕೀ
ನಿರ್ವಾಹ ಕೋರಕಿತ
ನೇಮಕಟಾಕ್ಷ ಲೀಲಾಂ
ಶ್ರೀರಂಗ ಹರ್ಮ್ಯತಲ
ಮಂಗಳ ದೀಪರೇಖಾಂ
ಶ್ರೀರಂಗರಾಜ ಮಹಿಷೀಂ
ಶ್ರಿಯಮ್ ಆಶ್ರಯಾಮಃ

(ಗುಣರತ್ನಕೋಶ)

ಸಪ್ತಲೋಕಗಳ ಉತ್ಪತ್ತಿಯೆಂಬ ಚಿಗುರನ್ನು ಹೊಂದಿ, ಪಾಲಿತವಾದ ಆ ಲೋಕಗಳ ನಿರ್ವಾಹ ಗಳೆಂಬ ಮೊಗ್ಗುಗಳಿಂದ ತುಂಬಿ, ಅರೆಗಣ್ಣೋಟದ ಲೀಲೆಯಿಂದ ಕೂಡಿದ ಮತ್ತು ಶ್ರೀರಂಗಕ್ಷೇತ್ರವೆಂಬ ಭವನತಲಕ್ಕೆ ಮಂಗಳಕರವಾದ ದೀಪರೇಖೆಯಾಗಿ ರುವ, ಶ್ರೀರಂಗನಾಥನ ಪಟ್ಟಮಹಿಷಿಯಾದ 'ಶ್ರೀ' ದೇವಿಯನ್ನು ಆಶ್ರಯಿಸುತ್ತೇನೆ.

ಕಲ್ಯಾಣಾನಾಮ್ ಅವಿಕಲನಿಧಿಃ
ಕಾಽಪಿ ಕಾರುಣ್ಯಸೀಮಾ
ನಿತ್ಯಾಮೋದಾ ನಿಗಮವಚಸಾಂ
ಮೌಳಿ ಮಂದಾರಮಾಲಾ
ಸಂಪತ್ ದಿವ್ಯಾ ಮಧು ವಿಜಯಿನಃ
ಸನ್ನಿಧತ್ತಾಂ ಸದಾಮೇ
ಸೈಷಾ ದೇವೀ ಸಕಲ ಭುವನ
ಪ್ರಾರ್ಥನಾ ಕಾಮಧೇನುಃ

(ಶ್ರೀಸ್ತುತಿ)

ಶ್ರೀದೇವಿಯು ವಿನಾಶರಹಿತ ವಾದ ನಿಧಿ; ಕಾರುಣ್ಯಕ್ಕೆ ಅನಿರ್ವಚನೀಯವಾದ ಎಲ್ಲೆ; ಸದಾ ಆನಂದಸ್ವರೂಪಳು; ವೇದವಾಕ್ಯಗಳ ಶಿರಸ್ಸಾದ ಉಪನಿಷತ್ತುಗಳಿಗೆ ಮಂದಾರ ಪುಷ್ಪಗಳ ಮಾಲೆ; ಮಧುಸೂದನನ ಲೋಕೋತ್ತರವಾದ ಸಂಪತ್ತು; ಸಮಸ್ತ ಜನರ ಪ್ರಾರ್ಥನೆಗೂ ಕಾಮ ಧೇನು; ಇಂತಹ ಶ್ರೀರಂಗನಾಯಕಿದೇವಿಯು ಸದಾ ನನ್ನಲ್ಲಿ ಸಾನ್ನಿಧ್ಯವಿಡಲಿ.

(ವಿವಿಧ ಮೂಲಗಳಿಂದ)

☆ ☆ ☆ ☆ ☆

# ಕುಮಾರವ್ಯಾಸ

---ಕೃಷ್ಣ ಹುನಗುಂದ.

ಕನ್ನಡ ನಾಡಿನ ಸಾಹಿತ್ಯ ಪ್ರಕಾರಗಳಲ್ಲಿ ಹರಿದಾಸಸಾಹಿತ್ಯ ವಚನಸಾಹಿತ್ಯಗಳು ಕಾಮನಬಿಲ್ಲುಗಳ ಬಣ್ಣಗಳಿದ್ದಂತೆ. ಕನ್ನಡನಾಡಿನ ಪ್ರತಿಯೊಂದು ಕಲ್ಲಿಗೂ ಒಂದೊಂದು ಕಥೆಯಿದೆ. ಒಂದೊಂದು ಕಳೆಯಿದೆ. ಇಲ್ಲಿ ಬಾಳಿದ ಮಹಾನುಭಾವರು ಸಿದ್ಧಪುರುಷರು. ಸಾಧನೆ ಮತ್ತು ತಪಸ್ಸುಗಳ ಮೂಲಕ ಸಿದ್ಧಿಯನ್ನು ಪಡೆದವರು. ಅಂಥಹ ಸಿದ್ಧಪುರುಷರಲ್ಲಿ ಮಹಾಕವಿ ಕುಮಾರವ್ಯಾಸನೂ ಒಬ್ಬ.

ಮಹಾಭಾರತ ಮತ್ತು ರಾಮಾಯಣ, ನಮ್ಮನಾಡಿನ ಅತ್ಯಂತ ಉತ್ಕೃಷ್ಟ ಗ್ರಂಥಗಳು. ಮಹಾಭಾರತದ ರೋಚಕ ಸನ್ನಿವೇಶಗಳು, ಭ್ರಾತೃತ್ವದ ದ್ರೋಹ, ಮಾನವ ತನ್ನ ದುಷ್ಟನಡವಳಿಕೆಯಿಂದ ವಿನಾಶದ ಅಂಚಿಗೆ ಹೇಗೆ ಬರಬಲ್ಲ ಎಂಬುದನ್ನು ತೋರಿಸಿಕೊಡುತ್ತದೆ. "ವಿಕ್ರಮಾರ್ಜುನ ವಿಜಯ", ರನ್ನನ "ಸಾಹಸಭೀಮ ವಿಜಯ", ಕುಮಾರ ವ್ಯಾಸನ "ಕರ್ಣಾಟ ಭಾರತ ಕಥಾಮಂಜರಿ", ತಿಮ್ಮಣ್ಣ ಕವಿಯ "ಕೃಷ್ಣರಾಜ ಭಾರತ", ಚಾಟು ವಿಠಲನ "ಭಾರತ", ಕನಕದಾಸರ "ನಳಚರಿತ್ರೆ", ಸಾಳ್ವನ "ಸಾಳ್ವಭಾರತ", ಲಕ್ಷ್ಮೀಶನ "ಜೈಮಿನಿಭಾರತ", ಗೋಪಕವಿಯ "ಚಿತ್ರಭಾರತ", 'ಸುರಂಗ ಕವಿಯಸುರಂಗಭಾರತ' --ಹೀಗೆ ಹಲವಾರು ಮಹಾಭಾರತದಿಂದ ಹೊರಟ ಗ್ರಂಥಗಳು ಪ್ರಸಿದ್ಧಿಯನ್ನು ಪಡೆದವು. ಇವುಗಳಿಲ್ಲಕ್ಕೂ ವ್ಯಾಸನಿರ್ಮಿತ ಭಾರತವೇ ಆಕರಗ್ರಂಥ. ಇವುಗಳಲ್ಲಿ ಭಾಮಿನಿ ಷಟ್ಪದಿಯಲ್ಲಿ ಕನ್ನಡದಲ್ಲಿ ರಚಿತವಾದ ಕುಮಾರವ್ಯಾಸನ ಭಾರತವೇ ಅತ್ಯಂತ ಸುಂದರ ಮತ್ತು ಹೃದ್ಯ.

ಧಾರವಾಡ ಜಿಲ್ಲೆಯ ಗದಗಿನ ಹತ್ತಿರವಿರುವ ಕೋಳಿವಾಡ ಎಂಬ ಊರು ಕುಮಾರವ್ಯಾಸನ ಜನನಸ್ಥಳ. ಈ ಊರಿನ ಶಾನಭೋಗರಾದ ಲಕ್ಕರಸ ಎಂಬಾತನಿಗೆ ಬಹುದಿನ ಮಕ್ಕಳಾಗಲಿಲ್ಲ. ಗದುಗಿನ ವೀರನಾರಾಯಣ ಸ್ವಾಮಿಯ ಗುಡಿಯು ಅತ್ಯಂತ ಪ್ರಾಚೀನ. ಇಲ್ಲಿ ಬಂದ ಲಕ್ಕರಸ ಭಕ್ತಿಯಿಂದ ವೀರನಾರಾಯಣನಲ್ಲಿ -- ನನಗೆ ಪುತ್ರಸಂತಾನವಾದರೆ, ನಿನ್ನ ಹೆಸರನ್ನಿಡುವೆ. ನಿನ್ನನ್ನ ಕುಲದೇವತೆಂದು ಆರಾಧಿಸುವೆ ಎಂದು ಬೇಡಿಕೊಂಡ. ಮುಂದೆ ಸ್ವಲ್ಪದರಲ್ಲೇ ಆ ದೇವರ ಅನುಗ್ರಹದಿಂದ ಗಂಡುಮಗುವೊಂದನ್ನು ಪಡೆದು ಅದಕ್ಕೆ "ವೀರನಾರಾಯಣ" ಎಂದೇ ನಾಮಕರಣಮಾಡಿದ. ನಂತರ ಕೃಷ್ಣರಸ, ಶಂಕರಸ, ತಿರುಮಲರಸ ಮತ್ತು ಅಶ್ವತ್ಥರಸ ಎಂದು ವೀರನಾರಾಯಣನ ಸಹೋದರರು ಹುಟ್ಟಿದರು. ಈ ವಂಶದ ಜನರು ಇಂದೂ ಕೋಳಿವಾಡದಲ್ಲಿರುವರು ಎಂದು ಹೇಳಲಾಗುತ್ತಿದೆ. ಮತ್ತು "ಕುಮಾರವ್ಯಾಸ" ಸ್ಮಾರಕಸಂಸ್ಥೆಯೊಂದನ್ನು ನಡೆಸಿಕೊಂಡು ಬರುತ್ತಿರುವರಂತೆ.

ಹೀಗೆ ಲಕ್ಕರಸನ ಜ್ಯೇಷ್ಠ ಪುತ್ರನಾದ ವೀರನಾರಾಯಣ ದೈವಾನುಗ್ರಹದಿಂದ ಗದುಗಿನ ನಾರಾಣಪ್ಪನಾದ ಎಂಬುದು ಒಂದು ಐತಿಹ್ಯ. ಈ ಗದುಗಿನ ವೀರನಾರಾಯಣದೇವರೇ ಸ್ವಪ್ನದಲ್ಲಿ ನಾರಾಣಪ್ಪನಿಗೆ ಬಂದು ಘಟನೆಯೊಂದನ್ನು ಸೂಚಿಸಿದ. ಮುಂದೆ ಆ ಘಟನೆಯಂತೆ, ಶ್ರೀಮಂತರ ಮನೆಯ ಭೋಜನದ ವೇಳೆ ಚಿರಂಜೀವಿಯಾಗಿ ಸಂಚರಿಸುತ್ತಿದ್ದ ಅಶ್ವತ್ಥಾಮನ (ಇವನು ಚಿರಂಜೀವಿ) ಭೇಟಿಯಾಯಿತಂತೆ. ಅವನಿಂದ ಮಹಾಭಾರತದ ಕತೆ ನಾರಾಣಪ್ಪನಿಗೆ ತಿಳಿಯಿತು. ಅಂದಿನಿಂದ ಪ್ರತಿದಿನ ನಾರಾಣಪ್ಪನು ವೀರನಾರಾಯಣನ ಪೂಜೆಯನ್ನು ಒದ್ದೆ ಪಂಚೆ ಧರಿಸಿಯೇ ಮಾಡಿ, ಅಲ್ಲಿಯೇ ಒಂದು ಕಂಬದ ಬಳಿ ಕುಳಿತು ಆ ಆವೇಶದಲ್ಲಿಯೇ ಕನ್ನಡದಲ್ಲಿ ಭಾರತವನ್ನು ರಚಿಸಿದನು. ಒದ್ದೆಯು ಒಣಗುವವರೆಗೂ ವೀರನಾರಾಯಣನೇ ನಮ್ಮನಾರಾಣಪ್ಪನಲ್ಲಿ ಸನ್ನಿಹಿತನಾಗಿರುತ್ತಿದ್ದನಂತೆ. ನಂತರ ನಾರಾಣಪ್ಪನಿಗೆ ಬರೆಯಲಾಗುತ್ತಿರಲಿಲ್ಲವಂತೆ. ಇದು ಒಂದು ದಂತಕಥೆಯೇ ಇರಬಹುದು. ಆದರೆ--

ವೀರನಾರಾಯಣನೆ ಕವಿ
ಲಿಪಿಕಾರ ಕುವರವ್ಯಾಸ

ಎಂಬ ಸ್ವತಃ ನಾರಾಣಪ್ಪನ ಉಕ್ತಿಯೇ ಈ ದಂತಕಥೆಗೆ ಪುಷ್ಟಿಯನ್ನು ಒದಗಿಸುತ್ತದೆ. ಈ ಮಹಾಭಾರತ ಕಥೆಯ ನಂತರ ನಾರಾಣಪ್ಪ "ಕುಮಾರವ್ಯಾಸ" ನೆಂದಾಗಿಯೂ ಆತನ ಈ "ಭಾರತ" -- "ಗದುಗಿನ ಭಾರತ"ವೆಂದೂ ಪ್ರಚಾರ ಪಡೆದುಕೊಂಡು ಬಂದಿತು.

ಕುಮಾರವ್ಯಾಸನ ಕಾಲ ಮತ್ತು ಮತವನ್ನು ನಿರ್ಣಯಿಸುವುದು 'ಸಂಶೋಧನೆಯಾಗಬೇಕಾದ ವಿಚಾರ. ಆದರೆ ಅವನು ಹದಿನೈದನೇ ಶತಮಾನದ ಕವಿ ಎಂಬಷ್ಟು ಮಾತ್ರ ಒಪ್ಪಬಹುದು. ಕುಮಾರವ್ಯಾಸ ಸ್ಮಾರ್ತನೆಂದೂ, ವೈಷ್ಣವನೆಂದೂ, ಕೆಲವರ ವಾದ. ಆದರೆ ಕುಮಾರವ್ಯಾಸನ--

ಬಣಗುಕವಿಗಳ ಲೆಕ್ಕಿಪನೆ
ಸಾಕೆಣೆಸದಿರು ಶುಕರೂಪನಲ್ಲವೇ
ಕುಣಿಸಿ ನಗನೇ ಕವಿ ಕುಮಾರವ್ಯಾಸನುಳಿದವರ

ಎಂಬ ವಚನದಂತೆ ಆತ ವೈಷ್ಣವನಿರಬೇಕೆಂದೇ ತೋರುತ್ತದೆ. ಏನೇ ಇರಲಿ, ಆತ ಯಾರು ಎಂಬುದಕ್ಕಿಂತ ಏನನ್ನು ಮಾಡಿದ, ನಮಗೆ ಆತನ ರಚನೆಯಿಂದ ಏನು ಪ್ರಯೋಜನ ಎಂಬುದೇ ಮುಖ್ಯ ಕನ್ನಡ ನಾಡು, ಜನತೆ ಈ ಕವಿಯ ರಚನೆಯಿಂದ ಪ್ರಭಾವಿತರಾಗಿದ್ದಾರೆ ಉಲ್ಲಸಿತರಾಗಿದ್ದಾರೆ, ಅವನ ಕಾವ್ಯ ಕನ್ನಡದೇವಿಯ ಮುಕುಟ ಮಣಿ ಎಂಬಷ್ಟು ಮಾತ್ರ ಸಾಕು.

'ಗದುಗಿನ ಮಹಾಭಾರತ' ೧೭೫ ಸಂಧಿಗಳ, ದಶಪರ್ವದಿಂದ ಕೂಡಿದೆ. ಅವುಗಳು ಆದಿ ಪರ್ವ, ಸಭಾಪರ್ವ, ಅರಣ್ಯಪರ್ವ, ವಿರಾಟಪರ್ವ, ಉದ್ಯೋಗ ಪರ್ವ, ಭೀಷ್ಮಪರ್ವ, ದ್ರೋಣಪರ್ವ, ಕರ್ಣಪರ್ವ, ಶಲ್ಯಪರ್ವ, ಮತ್ತು ಗದಾಪರ್ವ, ಕಾವ್ಯ ಪಾರಂಭವನ್ನೇ ಕವಿ --

ಶ್ರೀವನಿತೆಯರಸನೆ, ವಿಮಲ ರಾ
ಜೀವ ಪೀಠನ ಪಿತನೆ, ಜಗಕತಿ
ಪಾವನನೆ, ಸನಕಾದಿ ಸಜ್ಜನನಿಕರ ದಾತಾರ
ರಾವಣಾಸುರ ಮಥನ, ಶ್ರವಣ ಸು
ಧಾವಿನೂತನ ಕಥನಕಾರಣ
ಕಾವುದಾನತ ಜನವ ಗದುಗಿನವೀರನಾರಯಣ

ಎಂದು ತಮ್ಮ ಕಾವ್ಯದ ಸಂಪೂರ್ಣ ಹೊಣೆಯನ್ನು ಕುಲದೈವವಾದ ವೀರನಾರಾಯಣನಿಗೆ ಒಪ್ಪಿಸಿ ಬಿಡುತ್ತಾನೆ. ಇಡೀ ಮಹಾಭಾರತದ ಕಾರಣ ಪುರುಷ ಮತ್ತು ಕುಮಾರವ್ಯಾಸನ ದೃಷ್ಟಿಯಲ್ಲಿ ಕಥಾನಾಯಕ ಕೃಷ್ಣ. ಹಲವು ಜನ್ಮದ ಪಾಪರಾಶಿಯನ್ನು ತೊಳೆವ ಜಲದಂತೆ ಇದ್ದ ಪಂಚಮ ಶ್ರುತಿಗೆ ಸಮಾನವಾಗಿದ್ದ ಮಹಾಭಾರತದೊಳಗಿನ ಶ್ರೀಕೃಷ್ಣ ಕಥೆಯನ್ನು ಜಾಣರು ಮೆಚ್ಚುವಂತೆ ಹೇಳುತ್ತೇನೆ, ಎಂದು ಕುಮಾರವ್ಯಾಸ ಸಾಹಿತ್ಯ ಪ್ರತಿಜ್ಞೆಯನ್ನೇ ಮಾಡುತ್ತಾನೆ. ಹತ್ತೂ ಪರ್ವಗಳಲ್ಲಿ ಶ್ರೀಕೃಷ್ಣನ ದೇವಲೀಲೆಯನ್ನು ವರ್ಣಿಸುವುದೇ ಕುಮಾರವ್ಯಾಸನು ಸಾಹಿತ್ಯ ಕುಸುರಿಯಾಗಿದೆ.

ಸಂಪೂರ್ಣ ಭಾಮಿನಿ ಷಟ್ಪದಿಯಲ್ಲಿರುವ ಈ ಕುಮಾರವ್ಯಾಸನ "ಗದುಗಿನ ಭಾರತ" ಸಾಹಿತ್ಯಾಸಕ್ತರಿಗೆ ಉತ್ತಮ ರಸದೌತಣ. ಈ ಮಹಾಕವಿ ಕಥೆಯನ್ನು ಹೇಳುವ ರೀತಿ ತುಂಬಾ ಅದ್ಭುತ. ಈ ಭಾರತವನ್ನು ಓದುವಾಗ ಎಲ್ಲ ಘಟನೆಗಳೂ ಕಣ್ಣೆದುರಿಗೆ ನಡೆದಂತೆ ಭಾಸವಾಗುತ್ತದೆ. ಆ ಭಾರತದ ಪಾತ್ರಗಳು, ಘಟನೆಗಳು, ಆ ಕುದುರೆಗಳ ಖುರಪುಟದ

ಧ್ವನಿ, ಸಾಹಿತ್ಯದ ಮೂಲಕ ನಮ್ಮ ಕಿವಿಗೆ ಕೇಳು ತ್ತದೆಯೇನೋ ಎಂದು ಭಾಸವಾಗುತ್ತದೆ. ಅಭಿಮನ್ಯು ಸತ್ತ ಎಂಬ ಸುದ್ದಿ ಕೇಳಿದ ಅರ್ಜುನನಿಗೆ ಎಷ್ಟು ಕೋಪ ಬರುತ್ತದೋ ಎಂದು ಮೃತ್ಯುದೇವತೆಗೆ ಹೆದರಿಕೆಯಾಯಿತಂತೆ. "ಮೃತ್ಯುದೇವತೆ ಮೊರೆಹೊಕ್ಕಳು ಮಹೇಶ್ವರನ" ಎಂದು ವರ್ಣಿಸುತ್ತಾನೆ ಕುಮಾರವ್ಯಾಸ.

ಮಹಾಕವಿ ಕುಮಾರವ್ಯಾಸನು "ರೂಪಕ ಸಾಮ್ರಾಜ್ಯದ ಚಕ್ರವರ್ತಿ" ಎಂಬ ಮನ್ನಣೆಯನ್ನು ಪಡೆದಿದ್ದಾನೆ. ಅವನ ಕಾವ್ಯಭಾಷೆ ರೂಪಕನಿಷ್ಠ. "ರೋಷ ಜ್ವಾಲೆ", "ಮಾತಿನಗಾಳಿ", "ಶಾರ್ಙ್ಗ ವರ್ಷ" -- ಕೌರವರು--ಕಾಗೆ, ದ್ರೌಪದಿ ಕೋಗಿಲೆ, ನಾರಾಯಣಾಸ್ತ್ರ--ಸುರಧೇನು, ಕರ್ಣ--ಸೂರ್ಯ ಮೊದಲಾಗಿ ಕುಮಾರವ್ಯಾಸನ ಪಾತ್ರ, ಸನ್ನಿವೇಶ, ವರ್ಣನೆ ಎಲ್ಲವೂ ರೂಪಕ, ರೂಪಕಮಾಲೆ. --(ದ.ರಾ. ಬೇಂದ್ರೆಯವರು ಲೇಖನದಿಂದ)

ಈ ಕುಮಾರವ್ಯಾಸ ರಚಿಸಿದ ಕನ್ನಡ ಭಾರತದ ಉದ್ಯೋಗ ಮತ್ತು ಭೀಷ್ಮಪರ್ವಗಳು ಮಹಾರಾಷ್ಟ್ರದ ಚಂದ್ರಾತ್ಮರುದ್ರ ಎಂಬ ಕವಿಗೆ ಮರಾಠಿಯಲ್ಲಿ ಭಾರತವನ್ನು ಬರೆಯುವ ಪ್ರೇರಣೆ ಕೊಟ್ಟವು ಎಂಬುದು ಒಂದು ಹೆಮ್ಮೆಯ ವಿಷಯ. ಯಾವುದೇ ಒಂದು ದೇಶದ ಭಾಷೆಯ ಕೀರ್ತಿಯನ್ನು ದಿಗ್ದೇಶಕ್ಕೆ ಹಬ್ಬಿಸಲು ಒಂದು ಮಹಾಕಾವ್ಯ ಸಾಕು. ಮೋರೋಪಂತರ ಮರಾಠಿ ಭಾರತ, ನನ್ನಯ್ಯ ಕವಿಯ ತೆಲುಗು ಭಾರತ ತುಲಸಿದಾಸರ ಹಿಂದಿ ರಾಮಾಯಣ ಹೇಗೋ ಹಾಗೆ ಕುಮಾರವ್ಯಾಸನ ಕರ್ಣಾಟ ಭಾರತ ಕಥಾಮಂಜರಿ (ಗದುಗಿನ ಭಾರತ) ಕರ್ನಾಟಕದ ಜನತೆಯ ನಿತ್ಯಪಾರಾಯಣದ ಗ್ರಂಥವಾಗಿದೆ. (ದ.ರಾ. ಬೇಂದ್ರೆ)

ಮಹಾಕವಿ ಕುಮಾರವ್ಯಾಸನೇ ತನ್ನ ಗದುಗಿನ ಭಾರತದ ಬಗ್ಗೆ ಮತ್ತು ತನ್ನ ಕಥಾನಾಯಕ ಕೃಷ್ಣನ ಕಥೆಯ ಬಗ್ಗೆ--

ವೇದಪಾರಾಯಣದ ಫಲ ಗಂ
ಗಾದಿ ತೀರ್ಥಸ್ನಾನ ಫಲ, ಕೃ
ಚ್ಛ್ರಾದಿ ತಪಸಿನ ಫಲವು,
ಜ್ಯೋತಿಷ್ಟೋಮಯಾಗ ಫಲ
ಮೇದಿನಿಯನೊಲಿದಿತ್ತ ಫಲ, ವ
ಸ್ತ್ರಾದಿ ಕನ್ಯಾದಾನ ಫಲವಹು
ದಾದರಿಸಿ, ಭಾರತದೊಳೊಂದಕ್ಷರವ ಕೇಳ್ದರಿಗೆ

ಎಂಬ ಫಲಶ್ರುತಿಯೊಂದಿಗೆ ತನ್ನ ಭಾರತ ಕಥೆಯನ್ನು ಹೇಳುತ್ತಾನೆ.

ಈ ಗದುಗಿನ ಭಾರತದ ಸಾರವನ್ನೇ ನಮ್ಮ ಕನ್ನಡದ ವರಕವಿ, ಕುವೆಂಪುವರು

ಕುಮಾರವ್ಯಾಸನು ಹಾಡಿದನೆಂದರೆ
ಕಲಿಯುಗ ದ್ವಾಪರವಾಗುವದು
ಭಾರತ ಕಣ್ಣಲಿ ಕುಣಿಯುವದು
ಮೈಯಲಿ ಮಿಂಚಿನ ಹೊಳೆ ತುಳುಕಾಡುವುದು

ಎಂದು ಪದ್ಯವನ್ನು ರಚಿಸಿ ಮಹಾಕವಿ ಕುಮಾರವ್ಯಾಸನ "ಗದುಗಿನ ಭಾರತ"ಕ್ಕೆ ಮನ ಸೋತಿದ್ದಾರೆ. ಕರ್ನಾಟಕದ ಸಾಹಿತ್ಯವಾಹಿನಿಗೆ ಕುಮಾರವ್ಯಾಸನ ಈ ಭಾರತ ಕಥಾಮಂಜರಿಯೂ ಕೂಡ ಪೂರಕವಾಗಿದೆ.



## ಶಿಲಾವಿಗ್ರಹ ನೀಡಿಕೆ ಯೋಜನೆಗಳು

ವಿವಿಧ ಹಿಂದೂ ದೇವಾಲಯಗಳಲ್ಲಿ ಪ್ರತಿಷ್ಠಾಪನೆಗಾಗಿ ತಿ. ತಿ. ದೇವಸ್ಥಾನಗಳು ಶಿಲಾವಿಗ್ರಹ ನೀಡುವಿಕೆಯ ಎರಡು ಯೋಜನೆಗಳನ್ನು ಅಂಗೀಕರಿಸಿವೆ.

ಶಿಲಾವಿಗ್ರಹ ದಾನ ಯೋಜನೆಯಲ್ಲಿ ವಿವಿಧ ದೇವಾಲಯಗಳಿಗೆ ಪ್ರತಿಷ್ಠಾಪನೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀದೇವಿಯವರ ವಿಗ್ರಹಗಳನ್ನು ನೀಡಲಾಗುವುದು. ಇದಕ್ಕಾಗಿ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಗಳಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಅಸಿಸ್ಟೆಂಟ್ ಕಮಿಷನರ್‌ಗಿಂತ ಕಡಮೆಯವರಲ್ಲದ ಸ್ಥಳೀಯ ದೇವಾದಾಯ ಇಲಾಖಾಧಿಕಾರಿಗಳಿಂದ ಪ್ರಮಾಣಪತ್ರವನ್ನು ಕಳುಹಿಸಬೇಕು.

ಹಿಂದೂ ದೇವಾಲಯಗಳಿಗಾಗಿ ಇತರ ಎಲ್ಲ ದೇವ ದೇವತೆಯರ ಶಿಲಾ, ಪಂಚಲೋಹ, ವಿಗ್ರಹಗಳನ್ನೂ 50 ಶತಾಂಶ ರಿಯಾಯಿತಿ ದರಗಳಲ್ಲಿ ಒದಗಿಸಲಾಗುವುದು. ಇದಕ್ಕಾಗಿಯೂ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಯವರಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಅಸಿಸ್ಟೆಂಟ್ ಕಮಿಷನರ್ ಅವರ ಸ್ಥಾಯಿಯ ಸ್ಥಳೀಯ ಮುಜರಾಯಿ ಅಧಿಕಾರಿಯ ಪ್ರಮಾಣಪತ್ರವನ್ನು ಕಳುಹಿಸಬೇಕು. ಹಣದ ಸಂದಾಯವಾದ ನಂತರವೇ ವಿಗ್ರಹಗಳ ತಯಾರಿಕೆಯ ಕೆಲಸವನ್ನು ಕೈಗೆತ್ತಿಕೊಳ್ಳಲಾಗುವುದು.

ತಿರುಪತಿಯಿಂದ ವಿಗ್ರಹಗಳನ್ನು ಪಡೆದು ತಮ್ಮ ಸ್ಥಳಗಳಿಗೆ ಸಾಗಿಸುವ ಹೊಣೆ ಆಯಾ ಅಭ್ಯರ್ಥಿಗಳಿಗೇ ಸೇರಿದ್ದು.

ಕಾಲದಿಂದ ಕಾಲಕ್ಕೆ ತಿ. ತಿ. ದೇ. ಆಡಳಿತ ನಿರ್ವಾಹಕಮಂಡಳಿಯು ವಿಧಿಸುವ ಶರತ್ತುಗಳಿಗೆ ಅನುಗುಣವಾಗಿ ವಿಗ್ರಹಗಳನ್ನು ಸರಬರಾಜು ಮಾಡಲಾಗುವುದು.

ಈ ವಿಷಯದಲ್ಲಿನ ಎಲ್ಲ ವ್ಯವಹಾರಗಳಿಗೂ ಬರೆಯಬೇಕಾದ ವಿಳಾಸ--

**ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ--517 501.**

> **ಕರ್ಮಾನುಷ್ಠಾನ ದೀಪಿಕೆ**
> ಲೇಖಕರು—ಪ್ರಕಾಶಕರು :
> --ಎಚ್.ಜಿ. ರಾಮಯ್ಯಂಗಾರ್,
> 117/5 ಎ. ನಾಗರಾಜವಿಸ್ತರಣೆ,
> ಬಸವನಗುಡಿಬೀದಿ ಅಡ್ಡರಸ್ತೆ,
> ಬೆಂಗಳೂರು -- 19.
> ಪುಟಗಳು -- 200+8 ಬೆಲೆ: ರೂ. 30-00

# ಉಪಯುಕ್ತ ಕೃತಿ

---ವಿದ್ವಾನ್ "ರಘುಸುತ".

ಹೆಚ್. ಜಿ. ರಾಮಯ್ಯಂಗಾರ್ ರವರು ಕರ್ನಾಟಕ ಸರ್ಕಾರದ ಶಿಕ್ಷಣ ಇಲಾಖೆಯಲ್ಲಿ ಉನ್ನತೋದ್ಯೋಗದಲ್ಲಿದ್ದು, ಸಾಹಿತ್ಯ ಸೇವೆಯನ್ನು ಮುಂದುವರಿಸಿಕೊಂಡು ಬರುತ್ತಿರುವ ಹಿರಿಯ ಲೇಖಕರಾಗಿದ್ದಾರೆ. ಸಮಾಜ ಶಾಸ್ತ್ರ ಹಾಗೂ ಶ್ರೀ ವೈಷ್ಣವ ಧರ್ಮದ ಬಗ್ಗೆ ಅನೇಕ ಕೃತಿಗಳನ್ನು ರಚಿಸಿರುತ್ತಾರೆ. ಇವುಗಳಲ್ಲಿ "ಶ್ರೀ ರಾಮಾನುಜ ಸಿದ್ಧಾಂತ ದರ್ಪಣ" ಎನ್ನುವುದು ಬಹುಮುಖ್ಯವಾದ ಕೃತಿ. ೧೯೮೨ ರಲ್ಲಿ ಪ್ರಕಟವಾದ ಈ ಕೃತಿ ಮಾನವಿಕ ವಿಭಾಗದಲ್ಲಿ ಅತ್ಯುತ್ತಮ ಗ್ರಂಥವೆಂದು ಕರ್ನಾಟಕ ಸಾಹಿತ್ಯ ಅಕ್ಯಾಡೆಮಿಯಿಂದ ಪ್ರಶಸ್ತಿಗಳಿಸಿದೆ. ಈ ಕೃತಿಯನ್ನು ಪರಿಷ್ಕೃತಗೊಳಿಸಿ ರಾಮಾನುಜರ ಬ್ರಹ್ಮ ಸೂತ್ರ ಭಾಷ್ಯ (೧೯೯೧), ಶ್ರೀ ವೈಷ್ಣವ ಗುರು ಪರಂಪರೆ (೧೯೯೨), ಕರ್ಮಾನುಷ್ಠಾನ ದೀಪಿಕೆ (೧೯೯೨) -- ಮೂರು ಭಾಗಗಳಲ್ಲಿ ಪ್ರಕಟಿಸಲಾಗಿದೆ.

ಪ್ರಸ್ತುತ ವಿಮರ್ಶೆಗೆ ಒಳಪಡಿಸಿರುವ ಗ್ರಂಥವು ರಾಮಾನುಜ ಸಿದ್ಧಾಂತ ದರ್ಪಣದ ಮೂರನೇ ಭಾಗವಾದ 'ಕರ್ಮಾನುಷ್ಠಾನ ದೀಪಿಕೆ'. ಶ್ರೀ ವೈಷ್ಣವನು ಪ್ರತಿ ನಿತ್ಯವೂ ಆಚರಿಸಬೇಕಾದ ಕರ್ಮಗಳು ಹಾಗೂ ಉಪಯುಕ್ತ ಸ್ತೋತ್ರಾವಳಿಗಳಿಂದ ಕೂಡಿದೆ.

ಕೃತಿಯನ್ನು ಎರಡು ಭಾಗಗಳನ್ನಾಗಿ ವಿಭಾಗಿಸಲಾಗಿದೆ. ಮೊದಲ ಭಾಗದಲ್ಲಿ ನಿತ್ಯನೈಮಿತ್ತಿಕ ಕರ್ಮಗಳ ವಿವರಗಳಿವೆ. ಎರಡನೇ ಭಾಗದಲ್ಲಿ ಉಪಯುಕ್ತವಾದ ಸ್ತೋತ್ರಾವಳಿಗಳಿವೆ.

ಕೃತಿಯ ಪ್ರಾರಂಭದಲ್ಲಿ ಗುರು ಪರಂಪರಾಧ್ಯಾನವನ್ನು ನೀಡಲಾಗಿದೆ. ವಾಕ್ಯ ಗುರು ಪರಂಪರೆ, ಸಂಸ್ಕೃತ ಹಾಗೂ ತಮಿಳು ಶ್ಲೋಕಗಳ ಗುರುಪರಂಪರೆ ಇದೆ.

ಶ್ರೀ ವೈಷ್ಣವನು ಪ್ರತಿ ದಿನ ಐದು ಕಾಲಗಳಲ್ಲಿ ಮಾಡಬೇಕಾಗಿರುವ ಕೆಲಸಗಳನ್ನು ಮಾಡುವುದರಿಂದ, ಅವನು ಪಂಚಕಾಲಜ್ಞನಾಗುತ್ತಾನೆ. ಹಾಸಿಗೆಯಿಂದ ಏಳುವಾಗ ಅವನು ಸುಪ್ರಭಾತದ ಶ್ಲೋಕಗಳನ್ನು ಹೇಳುತ್ತಾನೆ. ಇದಾದ ನಂತರ ಅವನು ಷೋಡಶ ಸಂಸ್ಕಾರಗಳನ್ನು ಅನುಸರಿಸುತ್ತಾನೆ. ಹೀಗೆ ಅನುಸರಿಸಬೇಕೆಂಬುದರ ಸಂಪೂರ್ಣ ವಿವರಗಳನ್ನು ಲೇಖಕರು ನೀಡಿದ್ದಾರೆ. ಶಿಶುವಿನ ಜನನದ ಸಮಯದಲ್ಲಿ ಮಾಡಬೇಕಾದ ಜಾತಕರ್ಮ, ಮೇಧಾ ಜನನ, ನಾಮಕರಣ, ನಿಷ್ಕ್ರಮಣ, ಅನ್ನಪ್ರಾಶನ, ಚೌಲ, ಕಿವಿ ಚುಚ್ಚುವುದು, ಉಪನಯನ -- ಇತ್ಯಾದಿ ಸಂಸ್ಕಾರಗಳ ಬಗ್ಗೆ ಒತ್ತಿ ಹೇಳಿದೆ.

ಬ್ರಹ್ಮಚರ್ಯದ ಸಮಾವರ್ತನದ ನಂತರ ಆ ವ್ಯಕ್ತಿಯು ವಿವಾಹವಾಗಿ ಗೃಹಸ್ಥ ಜೀವನವನ್ನು ನಡೆಸುತ್ತಾನೆ. ಇಲ್ಲಿ ವಿವಾಹದ ಸಂಪೂರ್ಣ ವಿವರಗಳನ್ನು ಭಾವಾರ್ಥಗಳ ಸಹಿತ ಅರ್ಥಪೂರ್ಣವಾಗಿ ಲೇಖಕರು ನೀಡಿರುವುದು ಪ್ರಶಂಸಾರ್ಹವಾದುದು.

ಪ್ರತಿ ದಿನ ಸ್ನಾನ ಮಾಡುವ ರೀತಿ, ಬೇರೆ ಬೇರೆ ದಿವ್ಯದೇಶಗಳಲ್ಲಿ ಹೇಳಿಕೊಳ್ಳಬೇಕಾದ ಸಂಕಲ್ಪಗಳನ್ನು ನಂತರ ವಿವರಿಸಲಾಗಿದೆ. ಊರ್ಧ್ವಪುಂಡ್ರ ಧಾರಣೆ -- ಹೇಗೆ, ಎಲ್ಲೆಲ್ಲಿ, ಆ ಸಮಯದಲ್ಲಿ ಹೇಳಿಕೊಳ್ಳಬೇಕಾದ ಮಂತ್ರಗಳ ವಿವರಗಳನ್ನು ಸೂಕ್ತರೀತಿಯಲ್ಲಿ ನೀಡಲಾಗಿದೆ.

ಯಜ್ಞೋಪವೀತ ಧಾರಣೆ ಹಾಗೂ ಉಪಾಕರ್ಮ ಮಾಡಿಕೊಳ್ಳುವ ರೀತಿಯನ್ನು ನವಕಾಂಡ ಋಷಿ ತರ್ಪಣದ ಸಮೇತ ಹಾಗೂ ಮಾರನೇ ದಿನ ಮಾಡಿಕೊಳ್ಳಬೇಕಾದ ಗಾಯತ್ರೀ ಜಪ -- ಅವುಗಳ ಅರ್ಥ ಸಮೇತ ವಿವರಣೆ ನೀಡಿರುವುದು ಆಸ್ತಿಕರಿಗೆ ಅನುಕೂಲಕರವಾದುದಾಗಿದೆ.

ಸಂಧ್ಯಾವಂದನೆಯ ಅಧ್ಯಾಯದಲ್ಲಿ ತುಂಬಾ ಉಪಯುಕ್ತವಾದ ಅರ್ಥಗಳನ್ನೂ, ವಿವರಗಳನ್ನೂ ಲೇಖಕರು ನೀಡಿದ್ದಾರೆ. ಸಂಧ್ಯಾವಂದನೆಯ ಅಗತ್ಯ ಅದರ ಗುರಿ, ಅದರಿಂದಾಗುವ ಉಪಯೋಗ -- ಇತ್ಯಾದಿಗಳನ್ನು ಅದರ ಅರ್ಥವನ್ನು ಎಲ್ಲರಿಗೂ ತಿಳಿಯುವ ರೀತಿಯಲ್ಲಿ ಲೇಖಕರು ವಿವರಿಸಿದ್ದಾರೆ. ಸಂಧ್ಯಾವಂದನೆಯನ್ನು ಯಾವ ಕ್ರಮದಲ್ಲಿ ಮಾಡಬೇಕು, ಆಚಮನ, ಪ್ರಾಣಾಯಾಮ -- ಇತ್ಯಾದಿ ವಿವರಗಳ ಸಹಿತ ಸಂಕಲ್ಪ, ಮಾರ್ಜನ (ಪ್ರೋಕ್ಷಣೆ), ಪ್ರಾತಃ, ಮಾಧ್ಯಾಹ್ನಿಕ ಹಾಗೂ ಸಾಯಂ ಸಂಧ್ಯೆಗಳಲ್ಲಿ ಹೇಳಬೇಕಾದ ಮಂತ್ರಾಚಮನದ ಮಾಹಾತ್ಮೆ ಅದರ ಅಗತ್ಯ ಹಾಗೂ ಅದರಿಂದಾಗುವ ಉಪಯೋಗದ ಮಾಹಿತಿಯ ನಂತರ ಅಭಿವಾದನದಲ್ಲಿ ಹೇಳಿಕೊಳ್ಳಬೇಕಾದ ಬೇರೆ ಬೇರೆ ಗೋತ್ರ, ಪ್ರವರಗಳ ವಿವರಗಳನ್ನು ಲೇಖಕರು ಆ ನಂತರದಲ್ಲಿ ನೀಡಿದ್ದಾರೆ.

ನಂತರದ ಭಗವದಾರಾಧನದ ಅಧ್ಯಾಯದಲ್ಲಿ ಭಗವದಾರಾಧನದ ಕ್ರಮವನ್ನು ಎಲ್ಲ ವರ್ಗದ ಓದುಗರೂ ಅರ್ಥಮಾಡಿಕೊಳ್ಳುವಂತೆ ವಿವರಿಸಿರುವುದು ಸ್ತುತ್ಯಾರ್ಹ.

ಭಗವದಾರಾಧನೆಯು ಮಾನವ ಜೀವನದಲ್ಲಿ ಎಷ್ಟೊಂದು ಅಗತ್ಯ ಎಂಬುದನ್ನು ಮೊದಲು ವಿವರಿಸಲಾಗಿದೆ. ಪೂಜೆಗೆ ಅವಶ್ಯಕವಾದ ಅಂಶಗಳು, ಷೋಡಶೋಪಚಾರಗಳು ಹಾಗೂ ಪೂಜೆ ಮಾಡುವುದರಿಂದ ಯಾವ ರೀತಿ ಮನಶ್ಶಾಂತಿ ಲಭಿಸುತ್ತದೆ ಎನ್ನುವುದರ ವಿವರವನ್ನು ನೀಡಲಾಗಿದೆ. ಒಂದು ವೇಳೆ ಪೂಜೆ ಅಸಾಧ್ಯವಾದಲ್ಲಿ, ದೇವರ ಎದುರುಗಡೆ ದೀಪ ಹಚ್ಚಿ, ಸೇವಿಸುವ ಆಹಾರವನ್ನು ದೇವರ ಎದುರುಗಡೆ ಇಟ್ಟು ಶ್ರೀಕೃಷ್ಣಾರ್ಪಣ ಎಂದರೆ ಅಷ್ಟೇ ಸಾಕು ಎನ್ನುತ್ತಾರೆ ಲೇಖಕರು. ಭಗವದಾರಾಧನೆಯನ್ನು ಅನುಸರಿಸುವ ರೀತಿ ತುಂಬಾ ವಿವರವಾಗಿ ನೀಡಿದ್ದು, ಹೆಚ್ಚು ಕಷ್ಟವಿಲ್ಲದೆ ಭಕ್ತರು ಇದನ್ನು ಅನುಸರಿಸಬಹುದಾಗಿದೆ. ದೇವರ ಸಂಪುಟದ ಎದುರು ಪೂಜಾಪಾತ್ರೆಗಳು -- ಸಾಮಗ್ರಿಗಳನ್ನು ಕ್ರಮರೀತಿಯಲ್ಲಿ ಜೋಡಿಸಿಕೊಳ್ಳುವಿಕೆಯ ವಿವರ ಚಿತ್ರ ಸಹಿತವಾಗಿ ನೀಡಿರುವುದು ಸೂಕ್ತವಾಗಿದೆ. ಭಗವಂತನನ್ನು ಮಂದಾಸನದಿಂದ ಎಬ್ಬಿಸುವಿಕೆ ಅನುಸಂಧಾನ ಮಾಡಬೇಕಾದ ಸ್ತೋತ್ರಗಳು, ಗುರು ಪರಂಪರಾಧ್ಯಾನ, ಗಂಧವನ್ನು ಸಿದ್ಧಮಾಡಿಟ್ಟುಕೊಳ್ಳುವಿಕೆ ಹಾಗೂ ಆ ಸಂದರ್ಭದಲ್ಲಿ ಹೇಳಬೇಕಾದ ಸ್ತೋತ್ರಗಳು, ಮಂತ್ರಾಸನದ ಪರಿಗ್ರಹಣ, ಸ್ನಾನಾಸನ, ಅಲಂಕಾರಾಸನಗಳ ನಂತರ ಆರತಿ ಎತ್ತಿ, ತದನಂತರ ಭೋಜ್ಯಾಸನವನ್ನು ಅರ್ಪಿಸಿ, ಮಹಾ ನೀರಾಜನದ ನಂತರ ಶಾತ್ತುಮೊರೈಯನ್ನು ಹೇಳಬೇಕು ಎನ್ನುವ ವಿವರಗಳೊಂದಿಗೆ ಅವುಗಳನ್ನು ಹೇಗೆ ನಡೆಸಬೇಕು ಎನ್ನುವುದು ಕ್ರಮಬದ್ಧವಾಗಿ ನೀಡಿರುವುದು ಸಮಂಜಸವಾಗಿದೆ.

ಕೃತಿಯ ಎರಡನೇ ಭಾಗದಲ್ಲಿ ೧೧೪ ಪುಟಗಳ ಉಪಯುಕ್ತ ಸ್ತೋತ್ರಾವಳಿಯನ್ನು ನೀಡಲಾಗಿದೆ. ಮಾನವ ಜೀವನದಲ್ಲಿ ಸ್ತೋತ್ರಗಳ ಪ್ರಾಮುಖ್ಯತೆ, ಸ್ತೋತ್ರಗಳ ಪಾರಾಯಣ ಮಾಡುವ ರೀತಿ, ಅದ

([illegible] ನೇ ಪುಟ ನೋಡಿ)

# ತಿರುಮಲೆಯಲ್ಲಿ ವಸತಿ

* ತಿರುಮಲೆಯಲ್ಲಿ ಯಾತ್ರಿಕರಿಗಾಗಿ ಉಚಿತವಾಗಿ ಸತ್ರಗಳಲ್ಲಿ ವಸತಿಯುಂಟು. ಇಲ್ಲಿನ ಕೋಣೆಗಳಲ್ಲಿ ವಿದ್ಯುತ್, ನೀರು ಸಹ ಉಚಿತವೇ. ಆದರೆ ಇವುಗಳಲ್ಲಿ ಮಂಚ, ಹಾಸಿಗೆ ಮುಂತಾದ ಅನುಕೂಲಗಳು ಇಲ್ಲ. ಇವುಗಳಲ್ಲಿ ವಸತಿ ಬೇಕಾದವರು ತಿರುಮಲೆಯ ಬಸ್ ನಿಲ್ಲುವ ಸ್ಥಳದ ಕೇಂದ್ರ ವಿಚಾರಣಾ ಕಚೇರಿಯಲ್ಲಿ ಕೇಳಿ ಪಡೆಯ ಬಹುದು.

* ಮಂಚ ಹಾಸಿಗೆ ಮತ್ತಿತರ ಸೌಕರ್ಯಗಳಿರುವ ಕೋಣೆಗಳು ಪಡೆಯಲು ತಿರುಮಲೆಯ ಅಸಿಸ್ಟೆಂಟ್ ಎಕ್ಸಿಕ್ಯುಟಿವ್ ಆಫೀಸರ್ ಅವರನ್ನು ವಿಚಾರಿಸಬೇಕು. ಅಥವಾ ಕನಿಷ್ಠ 30 ದಿನಗಳ ಮುಂಚೆ ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ರೂ. 100-00 ಗಳ ಡಿ. ಡಿ.ಯನ್ನು ತೆಗೆದುಕೊಂಡು, ತಮಗೆ ವಸತಿ ಬೇಕಾದ ದಿನಾಂಕ, ತಿರುಮಲೆಗೆ ಎಷ್ಟು ಮಂದಿ ಬರುತ್ತಿರುವಿರಿ ಎಂಬ ವಿವರಗಳೊಡನೆ ಡಿ. ಡಿ.ಯನ್ನೂ, ವಿವರ ಪತ್ರವನ್ನೂ ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ (ರಿಸೆಪ್ಷನ್-1) ತಿರುಮಲೆ 517 504 ಇವರಿಗೆ ಕಳುಹಿಸಬೇಕು.

## ಬಾಡಿಗೆ (ಸೇವಾಶುಲ್ಕ) ಸಹಿತ ಕೋಣೆಗಳ ವಿವರ ಹೀಗಿದೆ.

| | ದಿನಕ್ಕೆ ಬಾಡಿಗೆ |
|---|---|
| 1. ಹಿಲ್‌ವ್ಯೂ (ಅರ್ಧಕಾಟೇಜು) ಶಂಕುಮಿಟ್ಟ | |
| ಶೇಷಾದ್ರಿನಗರ, ಅಂಜನಾದ್ರಿನಗರ, ಗರುಡಾದ್ರಿನಗರ | ರೂ. 15/- |
| ಎಚ್.ವಿ.ಡಿ.ಸಿ. ಪ್ರತಿಕಾಟೇಜು (ಗೀಜರ್‌ನೊಂದಿಗೆ) | ರೂ. 50/- |
| ಎಚ್.ವಿ.ಸಿ. ಪ್ರತಿಕಾಟೇಜು (ಗೀಜರ್ ಸಹಿತ) ದೊಡ್ಡವು | ರೂ. 30/- |
| ಎಚ್.ವಿ.ಸಿ. ಪ್ರತಿಕಾಟೇಜು (ಗೀಜರ್ ಸಹಿತ) ಚಿಕ್ಕವು | ರೂ. 25/- |
| (ಮೊದಲೇ ರಿಸರ್ವ್ ಮಾಡಿಸಬಹುದು) | |
| 2. ಮಂಗಳಬಾವಿ ಕಾಟೇಜುಗಳು ಟಿ.ಬಿ.ಸಿ. 3 ಸಾಲು ಹಿಂಬಾಗ | ರೂ. 50/- |
| ಟಿ.ಬಿ. ಕಾಟೇಜು ಗೀಜರ್‌ಸಹಿತ A, B. (ಪ್ರತಿಯೊಂದು) | ರೂ. 50/- |
| ಟಿ.ಬಿ. ಕಾಟೇಜು ಗೀಜರ್‌ಸಹಿತ C, D. (ಪ್ರತಿಯೊಂದು) | ರೂ. 60/- |
| ವಿ. ವಿ. ಸಿ. | ರೂ. 150/- |
| ಎಂ.ಬಿ.ಸಿ. ಗೀಜರ್ ಸಹಿತ (ಪ್ರತಿಯೊಂದು) | ರೂ. 50/- |
| ಟಿ.ಬಿ.ಸಿ. ಗೀಜರ್ ಸಹಿತ (ಪ್ರತಿಯೊಂದು) | ರೂ. 30/- |
| ಎ.ಟಿ.ಸಿ. (ಪ್ರತಿಯೊಂದು) | ರೂ. 30/- |
| ಎ.ಟಿ.ಸಿ. ಸೂಟ್‌ಗಳು | ರೂ. 15/- |
| 3. ಎಸ್.ವಿ.ಅತಿಥಿಗೃಹ, ಎಸ್.ವಿ.ಜಿ.ಎಚ್.-ಪ್ರತಿಸೂಟ್ | ರೂ. 100/- |
| ಆರ್. ಬಿ. ಜಿ. ಎಚ್; ಎನ್. ಎನ್. ಜಿ. ಎಚ್. -- | ರೂ. 100/- |
| ಮೂಲೆ ಕೋಣೆಗಳು -- | ರೂ. 150/- |
| (ರಿಸರ್ವೇಷನ್ ಪದ್ಧತಿಯಿಲ್ಲ) | |
| 4. ಟ್ರಾವೆಲರ್ಸ್ ಬಂಗ್ಲೆ (ಒಳಗಿನ ಕಾಟೇಜು) | ರೂ. 150/- |
| ನಾರಾಯಣಗಿರಿ ಕಾಟೇಜುಗಳು | ರೂ. 350/- |
| ಎನ್.ಜಿ.ಸಿ. -- 5, 12,13, | ರೂ. 500/- |
| ಎಚ್. ಆರ್. ಜಿ. ಕಾಟೇಜು ಪ್ರತಿಭಾಗ -- ಎ.ಸಿ. | ರೂ. 400/- |
| 5. ಮೋದಿಭವನ, ಪ್ರತಿಸೂಟ್ -- ಎ.ಸಿ. | ರೂ. 250/- |
| ಶ್ರೀ ನಿಕೇತನ ಅತಿಥಿಗೃಹ, ಪ್ರತಿಸೂಟ್ -- ಎ.ಸಿ. | ರೂ. 500/- |
| ಇಂದಿರಾ ಅತಿಥಿಗೃಹ, ಪ್ರತಿಸೂಟ್ -- ಎ.ಸಿ. | ರೂ. 500/- |
| ಬಾಲಕುಟೀರ, ಪ್ರತಿಸೂಟ್ -- ಎ.ಸಿ. | ರೂ. 250/- |
| ಶ್ರೀನಿವಾಸ ನಿಲಯ, ಪ್ರತಿಸೂಟ್ -- ಎ.ಸಿ. | ರೂ. 500/- |
| ಶ್ರೀಲಕ್ಷ್ಮಿನಿಲಯಂ, ಪ್ರತಿಸೂಟ್ -- ಎ.ಸಿ. | ರೂ. 500/- |
| ಗೋದಾವರಿಸದನ್, ಪ್ರತಿಸೂಟ್ -- ಎ.ಸಿ. | ರೂ. 500/- |
| ಗಾಂಬಲ್ ಅತಿಥಿಗೃಹ | ರೂ. 250/- |
| ಪದ್ಮಾವತೀ ಅತಿಥಿಗೃಹ (ಮಾಸ್ಟರ್‌ಸೂಟ್) | ರೂ. 1500/- |
| ಪದ್ಮಾವತೀ ಅತಿಥಿಗೃಹ ಇತರ -- ಪ್ರತಿಸೂಟ್ | ರೂ. 500/- |
| ವಿದ್ಯಾಸದನ್ ಮಾಸ್ಟರ್ ಸೂಟ್ | ರೂ. 1500/- |
| ವಿದ್ಯಾಸದನ್ ಇತರ -- ಪ್ರತಿಸೂಟ್ | ರೂ. 500/- |
| ಗೋಕುಲಂ ಅತಿಥಿಗೃಹ, ಪ್ರತಿಸೂಟ್ -- ಎ.ಸಿ. | ರೂ. 1000/- |
| ರಿಸರ್ವೇಷನ್ ಇಲ್ಲ. ಅವಕಾಶವಿದ್ದಂತೆ ನೀಡಲಾಗುವುದು. | |
| 6. ಮದುವೆ ಮಂಟಪಗಳು -- ಬೆಳಗ್ಗೆ 8 ರಿಂದ 24 ಗಂಟೆ. | |
| ಶಂಕುಮಿಟ್ಟ ಕಾಟೇಜುಗಳು -- 272, 260, 266, 267, | ರೂ. 100/- |
| ಟಿ. ಬಿ. ಕಾಟೇಜುಗಳು 71, ಮೂರನೇಸಾಲು 136, 152 | ರೂ. 100/- |
| ರೂಯಾಕಾಟೇಜು, ಗೋಗಿನೇನಿ ಕಾಟೇಜು, ಎ.ಟಿ.ಸಿ. 99 | ರೂ. 100/- |
| ಚಿದಂಬರಂ ಚೆಟ್ಟಿಯಾರ್ ಕಾಟೇಜು | ರೂ. 100/- |
| ಶ್ರೀ ಸೀತಾರಾಮ ಕಲ್ಯಾಣ ಮಂಟಪ | ರೂ. 1000/- |

* ದಿನವೆಂದರೆ ವಸತಿ ನೀಡಿದ ಹೊತ್ತಿನಿಂದ 24 ಗಂಟೆಗಳು.
* ಕೇಳಿದ ವಸತಿ ಇಲ್ಲದಿದ್ದಲ್ಲಿ ಬೇರೆ ವಸತಿ ನೀಡಿ, ಹೆಚ್ಚಿನ ಹಣವನ್ನು (ಇದ್ದರೆ) ಹಿಂದಿರುಗಿಸಲಾಗುತ್ತದೆ.
* ಒಂದು ದಿನಕ್ಕೆ ಮಾತ್ರವೇ ರಿಸರ್ವೇಷನ್. ಅಂದು ಬರದಿದ್ದಲ್ಲಿ ಮಾಸಲಾತಿ ರದ್ದಾಗಿ, ಹಣವನ್ನು ಹಿಂದಿರುಗಿಸುವುದೂ ಮತ್ತೊಂದು ದಿನಕ್ಕೆ ಹೊಂದಿಸುವುದೂ ಇಲ್ಲ.
* ಅವಧಿ ಮೀರಿದ ಮೇಲೂ ವಸತಿಯಲ್ಲಿಯೇ ಇದ್ದಲ್ಲಿ ಮೂರು ಪಾಲು ಹೆಚ್ಚಿನ ಹಣದ ದಂಡ ವಸೂಲು ಮಾಡಲಾಗುವುದು.
* ಇಲ್ಲಿ ಸೂಚಿಸಲಾಗಿರುವ ಸೇವಾಶುಲ್ಕಗಳು ಬದಲಾವಣೆ ಆಗಬಹುದು.

## ತಿರುಪತಿಯಲ್ಲಿ ವಸತಿ

| | |
|---|---|
| 1. ಎಸ್. ವಿ. ಅತಿಥಿಗೃಹ -- ಒಂದು ಕೋಣೆ -- ದಿನಕ್ಕೆ | ರೂ. 100/- |
| 2. ಅಲಿಪಿರಿ ಅತಿಥಿಗೃಹ -- ಒಂದು ಕೋಣೆ -- ದಿನಕ್ಕೆ | ರೂ. 75/- |
| 3. ಮೊದಲ ಹೊಸಸತ್ರ --ಸಿಂಗಲ್ ರೂಂ -- | ರೂ. 50/- |
| ಡಬಲ್ ರೂಂ -- | ರೂ. 100/- |
| 4 ಹಾಸಿಗೆಯ ರೂಂ -- | ರೂ. 100/- |
| 4. ಪದ್ಮಾವತೀ ಅತಿಥಿಗೃಹ (ಎ.ಸಿ.) | |
| ಸಿಂಗಲ್ ರೂಂ -- 9, 10, | ರೂ. 100/- |
| ಎರಡು ಹಾಸಿಗೆಯದು | ರೂ. 150/- |
| ಎರಡು ಹಾಸಿಗೆ -- ಮೊಸಾಯಿಕ್ ರೂಂ (11,12,15,17) | ರೂ. 200/- |
| ಎರಡು ಹಾಸಿಗೆ ಸೂಪರ್ ಮೊಸಾಯಿಕ್ ರೂಂ 16,18, | ರೂ. 250/- |

ಈ ದರಗಳು ಈಗ ಜಾರಿಯಲ್ಲಿವೆ.

# ಉಪನಿಷತ್ ಮೂಲತತ್ತ್ವ

---ವಿದ್ವಾನ್ 'ರಘುಸುತ'.

ಉಪನಿಷತ್ತು ರಹಸ್ಯವಾದ ವಿದ್ಯೆ. ಇದು ಬ್ರಹ್ಮಾನಂದವನ್ನು ಪಡೆಯುವ ದಾರಿಯಲ್ಲಿನ ವಿಘ್ನಗಳನ್ನು ದೂರಮಾಡಿ ಪರಮಾನಂದ ದೊರಕಿಸಿಕೊಡುತ್ತದೆ. 'ಸಂಹಿತಾಯಾ ಉಪನಿಷದಾಂ ವ್ಯಾಖ್ಯಾಸ್ಯಾಮಃ' ಎಂದು ತೈತ್ತರೀಯ ಉಪನಿಷತ್ತಿನಲ್ಲಿ ಆರಂಭವಾಗುವುದರಿಂದ, ಇದು ರಹಸ್ಯ ಎನ್ನುವುದನ್ನು ಸ್ಪಷ್ಟಗೊಳಿಸುತ್ತದೆ.

ಉಪನಿಷತ್ತುಗಳಲ್ಲಿ 'ಯ ಏವಂ ವೇದ' ಎಂಬ ಮಾತು ಬರುತ್ತದೆ. 'ಈಗ ಹೇಳಿದುದನ್ನು ಇಲ್ಲಿ ಹೇಳಿದಂತೆ ಅರಿಯುವವನು ಹೀಗೇ ಆಗುತ್ತಾನೆ' ಎಂಬರ್ಥವಿದು. ಉಪನಿಷತ್ತು ಹೇಳುವುದು ಸತ್ಯ ಎಂಬುದನ್ನು ಇದು ಅರ್ಥೈಸುತ್ತದೆ.

ರಹಸ್ಯವನ್ನು ತಿಳಿದುಕೊಳ್ಳುವ ವಿದ್ಯೆಯನ್ನು ಉಪನಿಷತ್ತು ತಿಳಿಸುತ್ತದೆ. ಅದರಿಂದ ಉಪನಿಷತ್ತನ್ನು ಅಧ್ಯಯನ ಮಾಡಿದವರು ಈ ರಹಸ್ಯವನ್ನು ಅರಿಯುತ್ತಾರೆ. ಈ ರಹಸ್ಯವೇ ಆನಂದ ಎನ್ನುವ ಬ್ರಹ್ಮ ಇದನ್ನು ಬೋಧಿಸುವ ಶಾಸ್ತ್ರವೇ ವೇದಾಂತ. ಇದನ್ನು ಅರಿತ ಮೇಲೆ, ಅಲ್ಲಿಂದ ಮುಂದೆ ಅರಿಯಬೇಕಾದುದೇನೂ ಇಲ್ಲ.

ವೇದಾಂತದಲ್ಲಿ ಪ್ರಸ್ಥಾನ ಎಂಬ ಮಾತೊಂದು ಬರುತ್ತದೆ. ಪ್ರಸ್ಥಾನ ಮೂರು -- ಉಪನಿಷತ್ತುಗಳು, ಬ್ರಹ್ಮಸೂತ್ರ, ಭಗವದ್ಗೀತೆ. ತಾವು ಹೇಳಿರುವ ವಿಷಯಗಳು ಉಪನಿಷತ್ತಿನಲ್ಲಿವೆ ಎಂದು ಬ್ರಹ್ಮಸೂತ್ರ, ಭಗದ್ಗೀತೆಗಳು ತಿಳಿಸುತ್ತವೆ. ಹಾಗೆಂದು ಹೇಳಿ ಅವು ಸತ್ಯ ಎನ್ನುತ್ತವೆ. ಅಂದರೆ ಉಪನಿಷತ್ತುಗಳು ಸತ್ಯವನ್ನು ಹೇಳುವ ಶಾಸ್ತ್ರಗಳಲ್ಲಿ ಮುಖ್ಯವಾದುವು ಎಂದು ಇದರ ಮುಖಾಂತರ ಹೇಳಲಾಗುತ್ತದೆ.

ಆತ್ಮವಿದ್ಯೆ ಅಥವಾ ಬ್ರಹ್ಮವಿದ್ಯೆಯನ್ನು ಉಪನಿಷತ್ತು ಎಂದೂ ಕರೆಯಲಾಗುತ್ತದೆ. ಇದು ವೇದದ ಅಂತಿಮ ಭಾಗ. ಅದರಿಂದ ಇದನ್ನು ವೇದಾಂತ ದೊಂದಿಗೆ ಸಂಬಂಧವನ್ನು ಹೊಂದಿರುವ ಶ್ರುತಿ -- ಸಂಗ್ರಹ -- ಗ್ರಂಥಗಳಿಗೂ ಕೂಡ ಉಪನಿಷತ್ ಶಬ್ದ ಪ್ರಯೋಗವಾಗುತ್ತದೆ.

ಉಪನಿಷತ್ತು ವೇದದ ಜ್ಞಾನಕಾಂಡ. ಇದು ಸೃಷ್ಟಿಯ ಆದಿಯಿಂದಲೂ ಪ್ರಕಾಶವನ್ನು ಕೊಡುತ್ತಾ ಬಂದಿದೆ. ಇದರ ಮುಖಾಂತರ ಸನಾತನ ಧರ್ಮವು ಎಲ್ಲೆಡೆ ಹರಡಲು ಸಾಧ್ಯವಾಗುತ್ತದೆ. ಜಗತ್ಕಲ್ಯಾಣವನ್ನು ಉಂಟುಮಾಡುವ ಈ ಸಂಪತ್ತು ಭಾರತದ ನಿಧಿಯಾಗಿದೆ. ಅಂತೆಯೇ ಉಪನಿಷತ್ತು ಅಪೌರುಷೇಯ ವೇದದ ಅಂತಿಮ ಅಧ್ಯಾತ್ಮ ರೂಪವಾಗಿದೆ.

'ಏಕಮೇವಾದ್ವಿತೀಯಂ ಬ್ರಹ್ಮ ನೇಹ ನಾನಾಸ್ತಿ ಕಿಂಚನ' ಎನ್ನುವುದನ್ನು ಉಪನಿಷತ್ತು ಪ್ರತಿಪಾದಿಸುತ್ತದೆ. ಇದರ ಪರಿಣಾಮವಾಗಿ ಮಾನವನನ್ನು ಅಲ್ಪಜ್ಞಾನದಿಂದ ಅನಂತ ಜ್ಞಾನದ ಕಡೆಗೆ, ಸೀಮಿತ ಸಾಮರ್ಥ್ಯದಿಂದ ಅನಂತ ಶಕ್ತಿಯ ಕಡೆಗೆ, ಪ್ರಪಂಚದ ದುಃಖಗಳಿಂದ ಅನಂತದ ಆನಂದದ ಕಡೆಗೆ, ಜನ್ಮ-- ಮೃತ್ಯು ಬಂಧನದಿಂದ ಅನಂತ ಸ್ವಾತಂತ್ರ್ಯ ಹಾಗೂ ಶಾಶ್ವತ ಶಾಂತಿಯ ಕಡೆಗೆ ಕರೆದೊಯ್ಯುತ್ತದೆ.

ಸೂಕ್ತ ಗುರುಗಳ ಮುಖಾಂತರವೇ ಉಪನಿಷತ್ತಿನ ಅಧ್ಯಯನವನ್ನು ಪಡೆಯಬೇಕು. ಗುರುವಿನ ಸಹಾಯವಿಲ್ಲದೆಯೆ ಅಧ್ಯಯನ ಮಾಡಬಹುದು. ಆದರೆ ಹೀಗೆ ಮಾಡುವುದರಿಂದ ಅದರಲ್ಲಿನ ಬ್ರಹ್ಮವಿದ್ಯೆಯು ಮಾತ್ರ ಪ್ರಾಪ್ತವಾಗುವುದಿಲ್ಲ. ಮಲಿನ ವಸ್ತ್ರದ ಮೇಲೆ ಬಣ್ಣ ಹೇಗೆ ಹತ್ತುವುದಿಲ್ಲವೊ ಹಾಗೆ ಬ್ರಹ್ಮವಿದ್ಯೆಯು ಪ್ರಾಪ್ತವಾಗುವುದಿಲ್ಲ. ಗುರುವಿನ ಮುಖಾಂತರ ಕಲಿತಲ್ಲಿ ಆತ್ಮನಿಷ್ಠಾರೂಪಿ ವೃದ್ಧಿ ಹಾಗೂ ಜೀವನ್ಮುಕ್ತಿ ರೂಪದಲ್ಲಿ ಫಲಪ್ರದವಾಗುತ್ತದೆ.

ಇದೇ ರೀತಿಯಲ್ಲಿ ಶಿಷ್ಯನೂ ಸೂಕ್ತ ರೀತಿಯ ಗುರುವಿನಿಂದ ಉಪನಿಷತ್ತಿನ ಉಪದೇಶ ಪಡೆಯಬೇಕು. ಗುರುವು ವೇದವೇದಾರ್ಥವನ್ನು ಚೆನ್ನಾಗಿ ತಿಳಿದವನಾಗಿರಬೇಕು, ಬ್ರಹ್ಮನಿಷ್ಠನಾಗಿರಬೇಕು, ಅಪರೋಕ್ಷ ಜ್ಞಾನಿಯಾಗಿದ್ದು ತತ್ತ್ವದರ್ಶಿಯೂ ಆಗಿರಬೇಕು.

ಸಾಧನಚತುಷ್ಟಯಸಂಪನ್ನ ಜಿಜ್ಞಾಸುವು ಬ್ರಹ್ಮನಿಷ್ಠ, ಸದ್ಗುರುವಿನಿಂದ ಉಪನಿಷತ್ ತತ್ತ್ವಗಳ ಉಪದೇಶಗಳನ್ನು ಆಲಿಸಿ, ಪಡೆದು, ತಾರ್ಕಿಕ ಯುಕ್ತಿಯ ಮುಖಾಂತರ ಅವುಗಳನ್ನು ಮನನ ಮಾಡುತ್ತಾ, ಗುರೂಪದಿಷ್ಟ ಧ್ಯಾನಾದಿಗಳನ್ನು ಅಭ್ಯಾಸ ಮಾಡುತ್ತಾ, ನಿಧಿಧ್ಯಾಸನದ ಮುಖಾಂತರ 'ಅಹಂ ಬ್ರಹ್ಮಾಸ್ಮಿ' ಇತ್ಯಾದಿಗಳನ್ನು ನಿರಂತರವಾಗಿ ಚರ್ಚೆಮಾಡುತ್ತ, ನಿಷ್ಠೆಯಿಂದ ಅಧ್ಯಯನ ಮಾಡುತ್ತಾ, ತತ್ತ್ವ ಜ್ಞಾನ ವಿಜ್ಞಾನ ಸ್ವರೂಪ ಪರಬ್ರಹ್ಮ ಸತ್ತಾದಲ್ಲಿ ಪ್ರವೇಶಿಸುತ್ತಾ ಅದೇ ತರಹ ಆಗಿಬಿಡುತ್ತಾನೆ.

'ಬ್ರಹ್ಮವೇದ ಬ್ರಹ್ಮೈವ ಭವತಿ' --ಎನ್ನುವ ಉಪನಿಷತ್ತಿನ ಉಪದೇಶದಂತೆ ಜಿಜ್ಞಾಸುವು ಪರಮ ಸೌಭಾಗ್ಯರೂಪೀ, ಅಮೂಲ್ಯ ನಿಧಿಯಾಗುತ್ತಾನೆ.

ಉಪನಿಷತ್ತಿನ ತತ್ತ್ವೋಪದೇಶವನ್ನು ಪಡೆಯುವವನು ಜೀವ -- ಬ್ರಹ್ಮೈಕ್ಯ ಪ್ರತಿಪಾದನೆಯನ್ನು



# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ -- ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

## ದರ್ಶನ ಹಾಗೂ ಸೇವಾ ವಿವರಗಳು

| ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5--00 ಪ್ರಾ 5--30 | ಪ್ರಾ 5--00 ಪ್ರಾ 5--30 |
| ವಿಶ್ವರೂಪ ಸರ್ವದರ್ಶನ | ಪ್ರಾ 5--30 ಪ್ರಾ 6--00 | ಪ್ರಾ 5--30 ಪ್ರಾ 6--00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6--00 ಪ್ರಾ 6--30 | ಪ್ರಾ 6--00 ಪ್ರಾ 6--30 |
| ಸಹಸ್ರನಾಮಾರ್ಚನೆ | ಪ್ರಾ 6--30 ಪ್ರಾ 7--00 | ಪ್ರಾ 6--30 ಪ್ರಾ 7--00 |
| ಮೊದಲನೇ ಗಂಟೆ | ಪ್ರಾ 7--00 ಪ್ರಾ 7--30 | ಪ್ರಾ 7--00 ಪ್ರಾ 7--30 |
| ಸರ್ವದರ್ಶನ | ಪ್ರಾ 7--30 ಪ್ರಾ 10--00 | *ಅಭಿಷೇಕ ಪ್ರಾ 7--30 ಪ್ರಾ 8--30 |
| | | ಸಮರ್ಪಣ ಪ್ರಾ 8--30 ಪ್ರಾ 9--30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10--00 ಪ್ರಾ 10--30 | ಪ್ರಾ 9--30 ಪ್ರಾ 10--30 |
| ಆರ್ಜಿತ | | ಕಲ್ಯಾಣೋತ್ಸವ ಪ್ರಾ 10--30 ಮ 12--00 |
| ಸರ್ವದರ್ಶನ | ಪ್ರಾ 10--30 ಸಂ 6--30 | ಪ್ರಾ 10--30 ಸಂ 6--30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6--30 ರಾ 7--00 | ಸಂ 6--30 ರಾ 7--00 |
| ಸರ್ವದರ್ಶನ | ರಾ 7--00 ರಾ 8--45 | ರಾ 7--00 ಪ್ರಾ 8--45 |
| ಏಕಾಂತ ಸೇವೆ | ರಾ 8--45 ರಾ 9--00 | ರಾ 8--45 ರಾ 9--00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ. 200--00 |
| * ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ. 100--00 |
| ಅರ್ಚನೆ (ಒಂದು ವರ್ಷ) | ರೂ. 42--00 |
| ಶಾಶ್ವತ ನಿತ್ಯಾರ್ಚನೆ | ರೂ. 542--00 |

ಮಾಡುತ್ತಾನೆ. ಪೂರ್ವಾಚಾರ್ಯರು ಸಂಕ್ಷೇಪದಲ್ಲಿ, 'ಜೀವೋ ಬ್ರಹ್ಮೈವ ನಾ ಪರಃ' ಎಂದು ಹೇಳಿದ್ದಾರೆ. ಅಂದರೆ ಜೀವನೇ (ಮಾನವನೇ) ಬ್ರಹ್ಮನಾಗಿದ್ದಾನೆ. ಅವನು ಬೇರೆಯೇ ಆಗಲು ಸಾಧ್ಯವಿಲ್ಲ.

ಉಪನಿಷತ್ತಿನ ಮುಖ್ಯ ಉಪದೇಶವೆಂದರೆ--

'ಸರ್ವಂ ಖಲ್ವಿದಂ ಬ್ರಹ್ಮ'

(ಇಲ್ಲಿರುವುದೆಲ್ಲ ಬ್ರಹ್ಮವೆ!)

'ತತ್ತ್ವಮಸಿ'

(ಅದೇ (ಬ್ರಹ್ಮನೇ) ನೀನಾಗಿರುವೆ.)

ಇದು ಉಪನಿಷತ್ತಿನ ತತ್ತ್ವಜ್ಞಾನೋಪದೇಶದ ಸಾರಾಂಶವಾಗಿದೆ. ಇದರಲ್ಲಿ ನಿಷ್ಠೆಯಿಂದ ಇಲ್ಲದಿರುವುದೇ ಅಜ್ಞಾನ. ಬ್ರಹ್ಮನು ಜೀವನಿಗಿಂತ ಅಭಿನ್ನನೇನಲ್ಲ. ಆದಾಗ್ಯೂ ಜೀವನು ತನ್ನಲ್ಲಿನ ಅವಿದ್ಯೆಯ ಕಾರಣ ತನ್ನ ವಾಸ್ತವಿಕ, ಅವಿನಾಶೀ, ಸಚ್ಚಿದಾನಂದ ಮಯ ಆತ್ಮಸ್ವರೂಪವನ್ನು ಮರೆಯುತ್ತಾನೆ. ಹೀಗೆ ಮರೆತು ತನ್ನನ್ನು ತಾನು ಜನನ -- ಮರಣಗಳ ದುಃಸ್ಥಿತಿಗೆ ಒಳಗಾಗಿಸಿಕೊಂಡು, ಸುಖದುಃಖಗಳಿಗೆ ಸಮಭಾಗಿಯೆಂದುಕೊಳ್ಳುವನು. ಇದರೊಂದಿಗೆ ಮಿಥ್ಯಾಜಗತ್ತಿನಲ್ಲಿ ಸ್ವನಿರ್ಮಿತ ಕರ್ಮಪಾಶದಲ್ಲಿ ತನ್ನನ್ನು ತಾನು ಬಂಧಿಸಿಕೊಂಡು ಜನನ -- ಮರಣ ಚಕ್ರಗಳಲ್ಲಿ ಕುಸಿದು, ಅನಂತ ದುಃಖವನ್ನು ಅನುಭವಿಸುತ್ತಿರುತ್ತಾನೆ.

ಇವೆಲ್ಲವುಗಳಿಂದ ದೂರವಾಗಲು ಜೀವ -- ಬ್ರಹ್ಮಗಳು ಒಂದಾಗುವಂತಹ ಸಂದರ್ಭವನ್ನು ಒದಗಿಸುವುದೇ ಅಲ್ಲದೆ ಜಗತ್ತು ಮಿಥ್ಯೆ ಎನ್ನುವ ಉಪದೇಶವನ್ನೂ ಉಪನಿಷತ್ತು ನೀಡುತ್ತದೆ. ಇದನ್ನು ಪೂರ್ವಾಚಾರ್ಯರು,

'ಬ್ರಹ್ಮಸತ್ಯಂ ಜಗತ್‌ಮಿಥ್ಯಾ'

ಎಂಬ ಸರಳ ಶಬ್ದಗಳಲ್ಲಿ ಸ್ಪಷ್ಟಪಡಿಸಿದ್ದಾರೆ.

ಬ್ರಹ್ಮವು ಸತ್ಯವಾದುದು ಹಾಗೂ ಜಗತ್ತು ಮಿಥ್ಯವಾದುದು. ಮುಸು ಕತ್ತಲು ಇರುವಾಗ ಹಗ್ಗವು ಸರ್ಪದಂತೆ ಕಾಣುತ್ತದೆ. ಇದೇ ರೀತಿಯಲ್ಲಿ ಅವಿದ್ಯಾವಂತನಾದವನಿಗೆ ನಿರ್ಗುಣ, ನಿರಾಕಾರ, ಬ್ರಹ್ಮಸತ್ತಾವು ಸುಗುಣ -- ಸಾಕಾರ, ಜಗದ್ರೂಪದಂತೆ ಕಂಡುಬರುತ್ತದೆ. ಮಸುಕು ಕತ್ತಲಿನಲ್ಲಿ ಹಗ್ಗವು ವಾಸ್ತವವಾಗಿ ಸ್ಪಷ್ಟವಾಗಿ ಕಾಣಿಸುವುದಿಲ್ಲ. ಅದು ಸರ್ಪದಂತೆ ಕಾಣಿಸುವುದು. ಇದಕ್ಕೆ ಕಾರಣ ಅವಿದ್ಯೆಯೆ. ಇದೇ ಅವಿದ್ಯೆಯಿಂದ ಬ್ರಹ್ಮನನ್ನು ನೈಜರೂಪದಲ್ಲಿ ಕಂಡುಕೊಳ್ಳುವುದಿಲ್ಲ.

ಇಲ್ಲಿ ವಸ್ತು ಒಂದೇನೇ. ಅದೇ ಹಗ್ಗ. ಭ್ರಮೆಯಿಂದ ಇದು ಸರ್ಪ ಆಕಾರದಂತೆ ಕಾಣಿಸುತ್ತದೆ. ಇದಕ್ಕೆ ಭ್ರಮಾವಸ್ಥೆಯೇ ಕಾರಣ. ಎಲ್ಲಿಯವರೆವಿಗೂ ಭ್ರಮೆ, ಅಜ್ಞಾನಾವಸ್ಥೆಗಳು ಜೀವಿಯಲ್ಲಿ ನೆಲೆಸಿರುತ್ತ,

ವೆಯೋ ಅಲ್ಲಿಯವರೆಗೂ ಅವನಿಗೆ ಅವಿದ್ಯೆ ವಿದ್ಯಾ ರೂಪೀ ಪ್ರಕಾಶವು ಜೀವಿಯಲ್ಲಿ ನೆಲೆಸಿದಾಗಲೇನೇ ಸರ್ವಾಧಿಷ್ಠಾನ ಬ್ರಹ್ಮಸತ್ತಾನೇ ಪಾರಮಾರ್ಥಿಕ ಸತ್ಯ ಎಂಬುದನ್ನು ತಿಳಿಯುತ್ತಾನೆ. ಹಗ್ಗದ ನಿಜ ಸ್ವರೂಪವೂ ಆಗಲೇ ಅರ್ಥವಾಗುತ್ತದೆ.

ಈ ರೀತಿಯಲ್ಲಿ ತತ್ತ್ವೋಪದೇಶದಿಂದ ನೈಜ ರೂಪವು ಆತ್ಮದಲ್ಲಿ ಪ್ರತಿಷ್ಠಿತವಾಗಿ ಶಾಶ್ವತ ಶಾಂತಿಮಯ ಪರಿಸ್ಥಿತಿಯನ್ನು ಜೀವನು ಪಡೆಯುತ್ತಾನೆ. ಇದೇ ಅವನ ಪರಮ ಪುರುಷಾರ್ಥ. ಉಪನಿಷತ್ತಿನ ಜ್ಞಾನ ನಿಷ್ಠೆಯ ಮುಖಾಂತರವೇ ಈ ಪರಮ ಪುರುಷಾರ್ಥವು ಪ್ರಾಪ್ತವಾಗುವುದು. ಇದಿಲ್ಲದೆ ಕೈವಲ್ಯದ ಪ್ರಾಪ್ತಿ ಉಂಟಾಗಲಾರದು. ಇದೇ ಉಪನಿಷತ್ತಿನ ಸಿದ್ಧಾಂತವಾಗಿದೆ--

'ಋತೇ ಜ್ಞಾನಾನ್ನ ಮುಕ್ತಿಃ'

ಉಪನಿಷತ್ತಿನ ತತ್ತ್ವಜ್ಞಾನದ ಮಹಿಮೆಯನ್ನು ವರ್ಣಿಸುತ್ತಾ ಮುಂಡಕ ಶ್ರುತಿ--

ವೇದಾಂತವಿಜ್ಞಾನ ಸುನಿಶ್ಚಿತಾರ್ಥಾಃ
ಸನ್ಯಾಸಯೋಗಾದ್ಯತಯಃ ಶುದ್ಧಸತ್ತ್ವಾಃ
ತೇ ಬ್ರಹ್ಮಲೋಕೇಷು ಪರಾಂತಕಾಲೇ
ಪರಾಮೃತಾಃ ಪರಿಮುಚ್ಯಂತಿ ಸರ್ವೇ
(೩-೨-೬) --ಎಂದು ಹೇಳಿದೆ.

ಇದೇ ರೀತಿಯಲ್ಲಿ ಕಠ--ಶ್ರುತಿಯೂ ಕೂಡ ಅಪರೋಕ್ಷ ಆತ್ಮಜ್ಞಾನಕ್ಕಾಗಿಯೇ ಶಾಶ್ವತ ಸುಖ--ಶಾಂತಿಗಳನ್ನು ಪಡೆಯಬೇಕೆಂಬ ತತ್ತ್ವವನ್ನು ನಿರ್ದೇಶಿಸುತ್ತದೆ. ಇತರರಿಗೆ ಇದು ನಿಷೇಧಿಸಲ್ಪಟ್ಟಿದೆ.

ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ--
ತೇಷಾಂ ಸುಖಂ ಶಾಶ್ವತಂ ನೇತರೇಷಾಮ್
ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಮ್

ಜೀವನು ಸ್ಥಾಯಿಯಾ ಸುಖ ಶಾಂತಿಗಳನ್ನು ಪಡೆಯಬೇಕೆಂದಿದ್ದಲ್ಲಿ ಅವನು ಆತ್ಮಾನುಭೂತಿಗಾಗಿ ಪ್ರಯತ್ನಶೀಲನಾಗಬೇಕಾದುದು ಅಗತ್ಯ. ಆಧ್ಯಾತ್ಮದ ಕಡೆಗೆ ಮುಂದುವರಿಯದೆ ಸ್ಥಾಯಿಯಾ ಸುಖ -- ಶಾಂತಿಗಳು ದೊರೆಯುವ ಸಾಧ್ಯತೆ ಇಲ್ಲವೇ ಇಲ್ಲ ಎಂದು ಉಪನಿಷತ್ತುಗಳು ಸ್ಪಷ್ಟಪಡಿಸಿವೆ.

ಈ ರೀತಿಯಲ್ಲಿ ಸಕಲ ಕಲ್ಯಾಣಾತ್ಮಕವಾದ ವೇದಗಳು ಕರ್ಮ, ಉಪಾಸನೆ, ಹಾಗೂ ಜ್ಞಾನಗಳ ಉಪದೇಶದ ಮುಖಾಂತರ ಜೀವನನ್ನು ಆಧ್ಯಾತ್ಮ ಮಾರ್ಗದ ಕಡೆಗೆ ಕರೆದೊಯ್ಯುತ್ತವೆ. ಜೀವನು ಯಾವುದೇ ಪರಿಸ್ಥಿತಿಯಲ್ಲಿದ್ದರೂ, ಅವನನ್ನು ಅದೇ ಪರಿಸ್ಥಿತಿಯಲ್ಲಿ ಅಧ್ಯಾತ್ಮದ ಕಡೆ ಕರೆದೊಯ್ಯುವ ಗುರಿಯನ್ನು ವೇದೋಪನಿಷತ್ತುಗಳು ಹೊಂದಿರುತ್ತವೆ.

ಅಧಿಕಾರಾನುಸಾರ ಜೀವಿಯನ್ನು ಕರ್ಮೋಪಾಸನೆಯಲ್ಲಿ ಪ್ರವೃತ್ತಗೊಳಿಸಿ, ಅಂತಃಕರಣವನ್ನು ಶುದ್ಧಿಗೊಳಿಸುವುದರ ಮುಖಾಂತರ ಅವನನ್ನು ತತ್ತ್ವಜ್ಞಾನದ ಅಧಿಕಾರಿಯನ್ನಾಗಿ ಮಾಡಿ, ಪರಮಾತ್ಮನಿಗೆ ನಿಷ್ಠಾವಂತನನ್ನಾಗಿ ಪರಿವರ್ತಿಸಿ, ಶಾಶ್ವತ ಸುಖ ಶಾಂತಿಗಳನ್ನು ಕೊಡಿಸುವುದೇ ವೇದೋಪನಿಷತ್ತುಗಳ ಕರ್ಮಕಾಂಡ ಹಾಗೂ ಉಪಾಸನಾಕಾಂಡದ ಚರಮ ಉದ್ದೇಶ್ಯವಾಗಿರುತ್ತದೆ.

ಈ ಉದ್ದೇಶ್ಯವನ್ನು ಪೂರ್ತಿಗೊಳಿಸುವುದಕ್ಕಾಗಿಯೇ ವೇದಮೂಲದ ವರ್ಣಾಶ್ರಮ ಧರ್ಮ ವ್ಯವಸ್ಥೆ ಇರುವುದು. ಈ ವ್ಯವಸ್ಥೆಯಲ್ಲಿ ವೈದಿಕ ಸಿದ್ಧಾಂತದ ಸಕ್ರಿಯ ವ್ಯಾವಹಾರಿಕ ರೂಪವು ನಿಷ್ಪನ್ನವಾಗಿದೆ.

ಪ್ರಪಂಚದಲ್ಲಿ ಸಮಾಜ ವ್ಯವಸ್ಥೆಯ ಉಜ್ವಲ ಆದರ್ಶರೂಪವು ಭಾರತೀಯ ವರ್ಣಾಶ್ರಮ ಧರ್ಮದ ವ್ಯವಸ್ಥೆಯಲ್ಲಿದೆ. ಇದು ಉತ್ತಮೋತ್ತಮ ಸಾಮಾಜಿಕ ವ್ಯವಸ್ಥೆಯಾಗಿದ್ದು, ಇದನ್ನೇ ಪಾರಮಾರ್ಥಿಕ ಸಾಧನವನ್ನಾಗಿ ಮಾಡಲಾಗಿದೆ. ಇದರ ಮುಖಾಂತರ ಜೀವನನ್ನು ಸತತೋನ್ನತಿಯ ಮಾರ್ಗದಲ್ಲಿ ಪ್ರತಿಷ್ಠಾಪಿಸಿ, ಅವನಿಗೆ ಪೂರ್ಣತ್ವದ ರೂಪವನ್ನು ನೀಡಲು ಸಹಕಾರಿಯಾಗುತ್ತದೆ.

ಈ ರೀತಿಯಲ್ಲಿ ಜೀವಿಗಳು ಯಾವ ಶ್ರೇಣಿಯಲ್ಲಿ, ಯಾವ ಅವಸ್ಥೆಯಲ್ಲಿ, ಎಲ್ಲೆಲ್ಲಿ ಇದ್ದಾರೆಯೊ, ಅವರುಗಳು ಅಲ್ಲಿ ಇದ್ದುಕೊಂಡೇ ತಮ್ಮ ತಮ್ಮ ಧರ್ಮವನ್ನು ಪಾಲಿಸುತ್ತಾ, ಸ್ವಾಭಾವಿಕ ರೂಪದಲ್ಲಿ ಅಧ್ಯಾತ್ಮದ ಕಡೆಗೆ ಮುಂದುವರಿಯಲಿ ಎಂದು ಧರ್ಮಶಾಸ್ತ್ರಗಳು ವಿಧಿಸಿವೆ.

ಆದುದರಿಂದ ಉಪನಿಷತ್ತಿನ ಮುಖಾಂತರ ಭಗವದ್ಗೀತೆಯು ಈ ಕೆಳಗೆ ತಿಳಿಸಿರುವ ಉಪದೇಶವನ್ನು ನೀಡುತ್ತದೆ. ಧರ್ಮಶಾಸ್ತ್ರದ ಅನುಸಾರ,

ಸ್ವೇ ಸ್ವೇ ಕರ್ಮಣ್ಯಭಿರತಃ
ಸಂಸಿದ್ಧಿಂ ಲಭತೇ ನರಃ (೧೮--೪೫)
ಯಃ ಶಾಸ್ತ್ರವಿಧಿ ಮುತ್ಸೃಜ್ಯ
ವರ್ತತೇ ಕಾಮಕಾರತಃ
ನ ಸ ಸಿದ್ಧಿಮವಾಪ್ನೋತಿ
ನ ಸುಖಂ ನ ಪರಾಂ ಗತಿಮ್
ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ
ಕಾರ್ಯ ಕಾರ್ಯ ವ್ಯವಸ್ಥಿತೌ
ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ
ಕರ್ಮ ಕರ್ತುಮಿಹಾರ್ಹಸಿ

ಈ ರೀತಿಯಲ್ಲಿ ಕರ್ಮಕ್ಷೇತ್ರದಲ್ಲಿ ಶಾಸ್ತ್ರೋಕ್ತವಾದ ಸ್ವಧರ್ಮಪಾಲನೆಯೆ ಸಮಸ್ತ ವೇದೋಕ್ತ ಜ್ಞಾನದ ಸಾರವಾಗಿರುತ್ತದೆ ಹಾಗೂ ಸರ್ವೋನ್ನತಿಯ ಮೂಲವಾಗಿರುತ್ತದೆ.

ಆದುದರಿಂದ ಸಾಮಾನ್ಯ ಧರ್ಮ, ವಿಶೇಷ ಧರ್ಮ ಹಾಗೂ ಆಪದ್ಧರ್ಮ ಇತ್ಯಾದಿಗಳ ಸ್ಪಷ್ಟ ವರ್ಣನೆ ನೀಡುವ ವೇದಮೂಲದ ಸನಾತನ ಧರ್ಮಶಾಸ್ತ್ರವು ಪ್ರತಿಯೊಂದು ಜೀವಿಗೂ ವ್ಯಷ್ಟಿ ರೂಪದಲ್ಲಿ ಹಾಗೂ ಸಮಸ್ತ ವಿಶ್ವಕ್ಕೂ ಸಮಷ್ಟಿ ರೂಪದಲ್ಲಿ ಒಂದು ಸಂದೇಶವನ್ನು ನೀಡುತ್ತದೆ. ಅದೇನೆಂದರೆ ಪ್ರತಿ ಜೀವಿಯೂ ಸುಖಶಾಂತಿಯನ್ನು ಬಯಸುವಂತಿದ್ದರೆ ಸ್ವಧರ್ಮವನ್ನು ಪಾಲಿಸುತ್ತಾ ಅಧ್ಯಾತ್ಮ ಪಥದಲ್ಲಿ ಮುಂದುವರಿಯಲಿ -- ಎಂಬುದು.

ದೇವೀ ಭಗವತಿಯು ಪ್ರತಿಯೊಂದು ಜೀವಿಯನ್ನೂ ಅದರದೇ ಆದ ಅವಸ್ಥೆಯಲ್ಲಿ ಇರುವಂತೆಯೇ ತನ್ನಂಕದಲ್ಲಿ ಕೂಡಿಸಿಕೊಂಡು ತನ್ನದೇ ಆದ ವೈಶಿಷ್ಟ್ಯಪೂರ್ಣ ಆಧ್ಯಾತ್ಮದಲ್ಲಿ ಪ್ರತಿಷ್ಠಿತಗೊಳಿಸಲು ತತ್ಪರಳಾಗಿರುತ್ತಾಳೆ. ಅಂತೆಯೇ ಆಕೆಯು--

ಉತ್ತಿಷ್ಠಿತ ಜಾಗ್ರತ ಪ್ರಾಪ್ಯ
ವರಾನ್ನಿಬೋಧತ

ಎಂದು ಪ್ರತಿಯೊಬ್ಬರನ್ನೂ ಎಚ್ಚರಿಸುವಳು. ♣

---

(27 ನೇ ಪುಟದಿಂದ)

ರಿಂದ ಉಂಟಾಗುವ ಉಪಯೋಗಗಳನ್ನು ತಿಳಿಸಲಾಗಿದೆ. ನಂತರದಲ್ಲಿ ಸ್ತೋತ್ರಗಳನ್ನು ನೀಡಲಾಗಿದೆ. ಲಕ್ಷ್ಮೀ ನರಸಿಂಹ, ರಂಗನಾಥ, ವರದರಾಜ, ವೆಂಕಟೇಶ, ಸಂಪತ್ಕುಮಾರ -- ಇತ್ಯಾದಿಯವರುಗಳ ಸುಪ್ರಭಾತ ಸ್ತೋತ್ರಗಳು; ಪುರುಷ ಸೂಕ್ತಂ, ನಾರಾಯಣ ಸೂಕ್ತಂ, ಶ್ರೀ ಸೂಕ್ತಂ, ಭೂ ಸೂಕ್ತಂ, ನೀಳಾಸೂಕ್ತಂ, ನಾರಾಯಣೋಪನಿಷತ್, ಜಿತಂತೇ ಸ್ತೋತ್ರಂ, ಶಾಂತಿ ಮಂತ್ರಾಃ -- ಇತ್ಯಾದಿ ಮಹರ್ಷಿಗಳಿಗೆ ಗೋಚರಿಸಿದ ಸ್ತೋತ್ರಗಳು; ಆಳ್ವಾರುಗಳು ರಚಿಸಿರುವ ನಿತ್ಯಾನುಸಂಧಾನದ ಪಾಶುರಗಳು; ನಾಮಮೌಕ್ತಿಕ ಮಾಲಾ, ಸ್ತೋತ್ರರತ್ನ, ಕಾಂತಾಸ್ತೋತ್ರಂ, ನ್ಯಾಸದಶಕಂ -- ಇತ್ಯಾದಿ ಆಚಾರ್ಯರು ರಚಿಸಿದ ಸ್ತೋತ್ರಗಳು; ವಿಷ್ಣು, ಲಕ್ಷ್ಮಿ ಸಹಸ್ರನಾಮ ಸ್ತೋತ್ರಗಳು; ನರಸಿಂಹ, ಹಯಗ್ರೀವ, ಗೋದಾ, ಆಂಜನೇಯ, ರಾಮಾನುಜ ಇತ್ಯಾದಿಯವರುಗಳ ಅಷ್ಟೋತ್ತರ ಶತನಾಮ ಸ್ತೋತ್ರಗಳು; ರಾಮಾನುಜ, ವೇದಾಂತ ದೇಶಿಕ, ವರವರಮುನಿಗಳ ಮಂಗಳಾಶಾಸನಗಳನ್ನು ನೀಡಲಾಗಿದೆ.

ಈ ವಿವರಗಳೆಲ್ಲ ಪ್ರತಿ ಶ್ರೀವೈಷ್ಣವನಿಗೂ ಉಪಯುಕ್ತವಾದುದು ಎನ್ನುವುದರಲ್ಲಿ ಸಂಶಯವೇ ಇಲ್ಲ. ಅಗತ್ಯವಿರುವ ಕಡೆಯಲ್ಲಿ ಎರಡೂ ಸಂಪ್ರದಾಯಗಳ ವಿವರ ನೀಡಿದ್ದರೆ ಚೆನ್ನಿತ್ತು. ಒಂದೆರಡು ಕಡೆ ಈ ಕಾರಣ ಓದುಗ ದಾರಿ ತಪ್ಪಬಹುದು.

ಇಂತಹುದೊಂದು ಉಪಯುಕ್ತ ಗ್ರಂಥವನ್ನು ನೀಡಿದ ಹೆಚ್. ಜೆ. ರಾಮಯ್ಯಂಗಾರ್‌ರವರಿಗೆ ಶ್ರೀ ವೈಷ್ಣವ ಬಾಂಧವರು ಎಷ್ಟು ಋಣಿಗಳಾಗಿದ್ದರೂ ಸಾಲದಾಗಿದೆ. ♣

# ವಾದಿರಾಜರು - ಹಯವದನ

---ಕೆ. ಆರ್. ಗೋಪಾಲಕೃಷ್ಣ.

ವ್ಯಾಸಾಯ ಭವನಾಶಾಯ
ಶ್ರೀಶಾಯ ಗುಣರಾಶಯೇ
ಹೃದ್ಯಾಯ ಶುದ್ಧ ವಿದ್ಯಾಯ
ಮಧ್ವಾಯ ಚ ನಮೋ ನಮಃ

ಉಡುಪಿಯ ಅಷ್ಟ ಮಠಗಳಲ್ಲಿ ಒಂದಾದ ಸೋದಾ ಮಠದ ಮೊದಲನೆಯ ಶ್ರೀಪಾದಂಗಳವರು ಶ್ರೀ ವಿಷ್ಣುತೀರ್ಥರು. ಇವರು ಆನಂದತೀರ್ಥ ಭಗವತ್ಪಾದರ ಪೂರ್ವಾಶ್ರಮದ ಸಾಕ್ಷಾತ್ ತಮ್ಮಂದಿರು. ಇವರ ಪರಂಪರೆಯಲ್ಲಿ ಹದಿನೇಳನೆಯವರು ವಾಗೀಶತೀರ್ಥ ಶ್ರೀಪಾದಂಗಳವರು. ಇವರ ಶಿಷ್ಯರು ಲೋಕದಲ್ಲಿ ಭಾವೀಸಮೀರರೆಂದು ಖ್ಯಾತಿಗಳಿಸಿರುವ ವಾದಿರಾಜ ಪ್ರಭುಗಳು. ಇವರ ತಂದೆಯವರು ರಾಮಾಚಾರ್ಯರು. ತಾಯಿಯು ಸರಸ್ವತೀ ದೇವಿಯರು.

ಈ ದಂಪತಿಗಳಿಗೆ ಸಂತಾನಭಾಗ್ಯ ಇಲ್ಲದಿರಲು ವಾಗೀಶತೀರ್ಥರಲ್ಲಿ ಮೊರೆಹೊಕ್ಕು ಪ್ರಾರ್ಥಿಸಿದಾಗ ಇವರ ತಪಸ್ಸಿನ ಬಲದಿಂದ ಜನಿಸಿದ ಮಗುವೇ ವಾದಿರಾಜರು. ಇವರ ಪೂರ್ವಾಶ್ರಮದ ಹೆಸರು ಭೂವರಾಹಾಚಾರ್ಯರು.

ಇವರ ಜೀವಿತಕಾಲ ಶಾ. ವಾ. ಶ. (ಕ್ರಿ.ಶ. ೧೪೮೦--೧೬೦೦) ೧೪೦೨--೧೫೨೨. ಇವರು ಸಣ್ಣವಯಸ್ಸಿನಲ್ಲೇ ವಾಗೀಶ ತೀರ್ಥರಿಂದ ಸನ್ಯಾಸವನ್ನು ಪಡೆದರು. ಈ ಮಹಾನುಭಾವರು ವೇದಾಂತ ಗ್ರಂಥಗಳನ್ನೂ, ಕಾವ್ಯಗಳನ್ನು ರಚಿಸಿರುವರು. ಅಲ್ಲದೆ ವಾದದಲ್ಲಿ ಪ್ರತಿವಾದಿಗಳನ್ನು ನಿಗ್ರಹಿಸಿ ಶ್ರೀಮದಾನಂದತೀರ್ಥರ ಸತ್ಸಿದ್ಧಾಂತವನ್ನು ಲೋಕದಲ್ಲಿ ನಿರ್ದುಷ್ಟವಾದದ್ದೆಂದೂ ಮೋಕ್ಷದಾಯಕವೆಂದೂ ಪ್ರಸಿದ್ಧಿಗೊಳಿಸಿದರು.

ಇಷ್ಟೇ ಅಲ್ಲದೆ ಕನ್ನಡ ಭಾಷೆಯಲ್ಲಿ ಅನೇಕ ಕೀರ್ತನೆಗಳನ್ನು ಗದ್ಯಪದ್ಯಾತ್ಮಕ ಕೃತಿಗಳನ್ನು ಹೃದಯಂಗಮವಾಗಿ ರಚಿಸಿರುತ್ತಾರೆ.

ವಾದಿರಾಜರು ಅನೇಕ ವಾಕ್ಯಾರ್ಥಗ್ರಂಥಗಳನ್ನು ರಚಿಸಿರುತ್ತಾರೆ. ಅವುಗಳಲ್ಲಿ ಮುಖ್ಯವಾದುದು "ಯುಕ್ತಿಮಲ್ಲಿಕಾ" ಇದು ಮಹಾ ಕಾವ್ಯದ ಸೊಬಗನ್ನು ಒಳಗೊಂಡಿದೆ. ಇದು ಮುಖ್ಯವಾಗಿ ಸ್ವಮತದಲ್ಲಿನ ಸ್ನೇಹದಿಂದಾಗಲೀ ಅಥವಾ ಪರಮತದಲ್ಲಿನ ದ್ವೇಷದಿಂದಾಗಲೀ ಬರೆದುದಲ್ಲ. ಮುಖ್ಯವಾಗಿ ಸಮೀಚೀನವಾದ ಯುಕ್ತಿಗಳಿಂದ ತತ್ವವನ್ನು ನಿರ್ಣಯಿಸುವುದಕ್ಕೋಸ್ಕರ ರಚಿಸುದಿದು ಎಂದು ರಾಜರೇ ತಿಳಿಸಿರುತ್ತಾರೆ.

ನ ಸ್ನೇಹಾನ್ನ ಚ ವಿಸ್ನೇಹಾತ್
ಉಕ್ತ್ವಾ ಕೃಷ್ಣೇ ನ ಕೇವಲಂ
ಯತಃ ಕೃತಾನಿ ತತ್ತರ್ಕ
ರಸಿಕಾನಾಂ ಮುದೇ ಭವ

ಈ ಯುಕ್ತಿಮಲ್ಲಿಕಾ ಗ್ರಂಥದಲ್ಲಿ ಐದು ಸೌರಭಗಳಿವೆ. ಅವುಗಳೆಂದರೆ ಗುಣ ಸೌರಭ, ಶುದ್ಧಿ ಸೌರಭ,



ಭೇದಸೌರಭ. ವಿಶ್ವಸೌರಭ ಮತ್ತು ಫಲಸೌರಭ. ಇವು ಕ್ರಮವಾಗಿ ಶ್ರೀಮನ್ನಾರಾಯಣನ ಕಲ್ಯಾಣ ಗುಣ ಪೂರ್ಣತ್ವವನ್ನು, ಅವನ ನಿರ್ದೋಷತ್ವವನ್ನು ಜೀವ ಪರಮಾತ್ಮರ ಭೇದ, ಜಗತ್ತು ಸತ್ಯವೆಂಬುದನ್ನು ಮತ್ತು ಜ್ಞಾನಸಾಧನೆಯನ್ನು ಸವಿಸ್ತಾರವಾಗಿ ಗುರುಗಳು ವಿವರಿಸಿರುತ್ತಾರೆ.

ಮುಖ್ಯವಾಗಿ ಮಾಧ್ವಜನಾಂಗದವರಿಗೆ ಶ್ರೀಮನ್ನ್ಯಾಯಸುಧಾವ್ಯಾಸಂಗ ಹೇಗೆ ಅಗತ್ಯವೋ ಹಾಗೆಯೇ ಯುಕ್ತಿಮಲ್ಲಿಕಾ ಗ್ರಂಥದ ವ್ಯಾಸಂಗ ಅಷ್ಟೇ ಮುಖ್ಯವಾದದ್ದು.

ವಾದಿರಾಜರು ಇನ್ನೊಂದು ಮುಖ್ಯಮಹಾಕಾವ್ಯವಾಗಿರುವ ಶ್ರೀರುಕ್ಮಿಣೀಶವಿಜಯ ರಚಿಸಿರುತ್ತಾರೆ ಇದರ ನಾಯಕ ಶ್ರೀಕೃಷ್ಣಪರಮಾತ್ಮ ನಾಯಕಿ ರುಕ್ಮಿಣೀದೇವಿ. ಇದರಲ್ಲಿ ಶ್ರೀಮದ್ಭಾಗವತದ ದಶಮ ಸ್ಕಂದದಲ್ಲಿ ಉಕ್ತವಾದ ಶ್ರೀಕೃಷ್ಣಕಥೆ ಮತ್ತು ರುಕ್ಮಿಣೀ ಸ್ವಯಂವರವೂ ವರ್ಣಿಸಲ್ಪಟ್ಟಿದೆ. ಶ್ರೀ ರುಕ್ಮಿಣೀಶ ವಿಜಯದಲ್ಲಿ ಕಾವ್ಯದ ಸೌಂದರ್ಯದ ಜೊತೆಗೆ ಆನಂದತೀರ್ಥರ ಸತ್ ಸಿದ್ಧಾಂತದ ಪ್ರಮೇಯಗಳ ತತ್ವವಿಚಾರ ಬಹು ಹೃದಯಾಂಗಮವಾಗಿ ವರ್ಣಿಸಲ್ಪಟ್ಟಿದೆ.

ರಾಜರ ಇನ್ನೊಂದು ಉಪಯುಕ್ತ ಗ್ರಂಥವೆಂದರೆ "ಸರಸ ಭಾರತೀ ವಿಲಾಸ" ಅವರೇ ಹೇಳಿರುವಂತೆ

ಚಾರ್ವಾಕಪೂರ್ವಪದ ಕ್ಷೇಪಿಣೀಂ
ದುರ್ವಾಗ್ಗರ್ವಾಪಹಾರಿಣೀಂ
ಸರ್ವೇಷ್ಟಕಾರಿಣೀಮುರ್ವೀಂ
ಕುರ್ವೇ ಸರಸ ಭಾರತೀ

ಎಂದರೆ "ದುರ್ವಾದಿಗಳ ಗರ್ವ ಅಪಹರಿಸತಕ್ಕ, ಸಜ್ಜನರಿಗೆ ಸರ್ವ ಇಷ್ಟಾರ್ಥಗಳನ್ನು ಕೊಡುವ, ಉತ್ಕೃಷ್ಟ ಗ್ರಂಥ ಇದಾಗಿದೆ". ಇದರಲ್ಲಿ ಪರಮಾತ್ಮನ ಹಿರಿಮೆ, ರಮಾದೇವಿ ಮಹಿಮೆ ಹಾಗೆಯೇ ಬ್ರಹ್ಮದೇವರು, ವಾಯುದೇವರು ನಂತರ ತಾರತಮ್ಯವಾಗಿ ಎಲ್ಲಾ ದೇವತೆಗಳ ಹಿರಿಮೆಯನ್ನು ಬಹಳ ಸುಂದರವಾಗಿ, ಭಕ್ತಿಯುತವಾಗಿ ಹೃದಯಂಗಮವಾಗಿ ಸ್ತುತಿ ಮಾಡಿರುತ್ತಾರೆ.

ಈ ಗ್ರಂಥ ಹನ್ನೆರಡು ವಿಲಾಸ (ಅಧ್ಯಾಯ)ಗಳನ್ನು ಒಳಗೊಂಡಿದೆ. ಪ್ರಥಮ ವಿಲಾಸದಲ್ಲಿ ಮಂಗಳಾಚರಣೆ, ಗ್ರಂಥ ಪ್ರಯೋಜನ ಹಾಗೂ ಹಯಗ್ರೀವ ದೇವರಸ್ತುತಿ, ದಶಾವತಾರಾದಿ ಭಗವದ್ರೂಪಗಳ ಮಹಿಮಾವರ್ಣನೆ ಸುಂದರ ಶೈಲಿಯಲ್ಲಿ ವರ್ಣಿತವಾಗಿದೆ.

ಗ್ರಂಥದ ಪ್ರಾರಂಭದಲ್ಲಿ ವಾದಿರಾಜರು ಹಯವದನ ನಾಮಕ ಹರಿಯು ತಮಗೆ ಮಂಗಳವನ್ನುಂಟು ಮಾಡಲಿ ಹಾಗೂ ಮಧ್ವನಾಮಕ ಗುರುವು ತಮಗೆ ಇಷ್ಟಪ್ರದನಾಗಲಿ ಎಂದು ಪ್ರಾರ್ಥಿಸಿರುತ್ತಾರೆ.

ಕರೋತು ಮಮ ಕಲ್ಯಾಣಂ
ಹರಿರ್ಹಯ ಮುಖಾಭಿದಃ
ಗುರುಶ್ಚ ಮಧ್ವ ನಾಮಮೇ
ವರದೋಸ್ತು ನಿರಂತರಂ

--ಎಂದಿದ್ದಾರೆ.

ಹಯವದನ ದೇವರ ಕೃಪೆಯಿಂದ ತಮ್ಮಿಂದ ರಚಿತವಾದ ಈ ಗ್ರಂಥದ ಶ್ರವಣ ಮನಸವು ಕಾಮನನ್ನು ಜಯಿಸುವುದರಲ್ಲಿ ಸಮರ್ಥವಾಗಲಿ ಎಂದಿದ್ದಾರೆ. ಲೋಕದಲ್ಲಿ ಕಂಡಕಂಡವರಿಗೆ

ಒಳ್ಳೆಯ ಮಾತನ್ನಾಡಿದರೂ, ಸ್ತೋತ್ರ ಮಾಡಿದರೂ, ಅಮೋಘ ಕಾಣಿಕೆಯನ್ನಿತ್ತರೂ ಅದರಿಂದ ಬರುವ ಪ್ರಯೋಜನವೇನೂ ಇಲ್ಲ. ಆದ್ದರಿಂದ ಹಯಗ್ರೀವಸ್ವಾಮಿಯನ್ನು ಸದಾ ಸ್ಮರಿಸಿ ಉತ್ತಮ ಪುರುಷಾರ್ಥವನ್ನು ಅವನ ಪ್ರಸಾದದಿಂದ ಪಡೆಯ ಬೇಕೆಂದು ಈ ಸ್ತೋತ್ರದಿಂದ ಅಪ್ಪಣೆ ಕೊಡಿಸಿರುತ್ತಾರೆ.

ಕಸ್ಯ ಕಸ್ಯ ಪ್ರಿಯಂ ಬ್ರೂಮಃ
ಸ್ತುಮಃ ಕಂ ಕಂ ಪದೇ ಪದೇ
ಕಸ್ಮೈ ಕಸ್ಮೈ ದಿಶಾಮೋಽರ್ಥಂ
ಕಸ್ಮಾದ್ವಾಽಸ್ತ್ವತ್ಪ್ರಯೋಜನಂ

ಹಾಗೆಯೇ ವಿವರಿಸುತ್ತ ಸೂರ್ಯ ಪ್ರಕಾಶವು ಹೇಗೆ ಸುಲಭವಾಗಿ ಮಂಜನ್ನು ನಿವಾರಿಸುತ್ತದೆಯೋ ಹಾಗೆಯೇ ನಿನ್ನ ದಿವ್ಯ ಶ್ರೀಪಾದ ದ್ವಯಗಳೆರಡನ್ನೂ ಆಶ್ರಯಿಸಿದವನು ಈ ಸಂಸಾರದಿಂದ ನಿವೃತ್ತಿಯಾಗುವುದರಲ್ಲಿ ಸಂದೇಹವಿಲ್ಲವೆಂದಿದ್ದಾರೆ.

ಹಯವದನ ಸ್ವಾಮಿಯೇ, ನಿನ್ನನ್ನು, ನಾನು ಆಶ್ರಯಿಸಿರುವುದರಿಂದ ಆಶ್ರಿತನಾದ ನನಗೆ ಗೂಢವಾದ ಶಾಸ್ತ್ರಾರ್ಥವನ್ನು ಬೋಧಿಸು ಎಂದು ಈ ಸ್ತೋತ್ರದಿಂದ ಪ್ರಾರ್ಥಿಸಿರುತ್ತಾರೆ.

ಹಯಾಸ್ಯ ಸುಜನಾಶಾಸ್ಯ
ಗತಾಲಸ್ಯಾಽಶ್ರಿತಸ್ಯ ಮೇ
ರಹಸ್ಯಜ್ಞ ರಹಸ್ಯಾಜ್ಞಾಪಯ
ಜ್ಞಾನಸ್ಯ ಸಂಪದಂ

ಹರಿವಾಯುಗಳನ್ನು ಭಕ್ತಿ ಪೂರ್ವಕವಾಗಿ ಆಶ್ರಯಿಸಿದ ಸಜ್ಜನರು ಸಾಮಾನ್ಯ ಜನರ ಅಪಹಾಸ್ಯ ನಿಂದೆ ಮಾತು ಮೊದಲಾದವುಗಳನ್ನು ಲಕ್ಷಿಸರು. ಹೇಗೆಂದರೆ--

ಅನುತ್ಸಾಹ ಮಹೋತ್ಸಾಹ
ಚರಣ ಸ್ಮರಣೇ ಸತಾಂ
ಶರಣೇ ಸತಿ ಜಲ್ಪಂತಃ
ಕಿಮು ಸಂತೋ ಹಸಂತು ನಃ

(ಇಲ್ಲಿ ಅನುತ್ಸಾಹಃ ಎಂದು ಋಜುಗಣಸ್ಥರಾದ ವಾಯುದೇವರು, ಮಹೋತ್ಸಾಹಃ ಎಂದರೆ ವಿಷ್ಣುವು. ವಿಷ್ಣು ಸಹಸ್ರನಾಮದಲ್ಲಿ -- ಮಹೋತ್ಸಾಹೋ ಮಹಾಬಲಃ -- ಎಂಬುದು ಉಕ್ತವಾಗಿದೆ. ಅದರಂತೆ ವಾದಿರಾಜ ಪ್ರಭುಗಳು ಈ ಪದ ಬಳಸಿರುತ್ತಾರೆ.)

ಅಪಾನವಾಯು, ಪ್ರಾಣವಾಯು ಇವೆರಡೂ ವಾಮನರೂಪಿ ಹರಿಯನ್ನು ಆಶ್ರಯಿಸಿವೆ. ವಾಮನರೂಪಿಯಾದ ಹಯವದನನನ್ನು ನಾವು ಆಶ್ರಯಿಸಬೇಕೆಂದಿದ್ದಾರೆ ರಾಜರು. ಹಯವದನಸ್ವಾಮಿಯ ಅನಿಮಿತ್ತೋಪಕಾರ ಸ್ತುತ್ಯರ್ಥವಾದದ್ದು. ಯಾರಿಂದಲೂ ಪೂರ್ತಿಯಾಗಿ ತಿಳಿಯಲು ಶಕ್ಯನಲ್ಲವನು, ಧ್ಯಾನಾರ್ಹನು, ವೇದಗಳ ಪ್ರತಿಪಾದ್ಯನು, ದಯಾವಂತನು, ದುಷ್ಟರಿಂದ ಜಯಿಸಲು ಅಸಾಧ್ಯನಾದವನು, ಶ್ರೀ (ಲಕ್ಷ್ಮಿಗೆ) ಸಹಾಯನಾದ ಇಂತಹ ನೃಹಯನನ್ನು ಭಜಿಸುತ್ತೇನೆಂದು ವರ್ಣಿಸಿದ್ದಾರೆ.

ಸುಮತಿಭಿರನುಮೇಯಂ
ಶುಭ್ರ ಕಾಯಂ ಸಖಾಯಂ
ಸುಖಮಯ ಮನಪಾಯಂ
ಮುಕ್ತ್ಯುಪಾಯಂ ವಿಮಾಯಂ
ನೃಹಯ ಮಹಮಮೇಯಂ
ಧ್ಯೇಯ ಮಾಮ್ನಾಯಗೇಯಂ
ಸದಯ ಮಸದ ಜೇಯಂ
ಶ್ರೀ ಸಹಾಯಂ ಭಜೇಯಂ

ಹೀಗೆ ಸುಂದರವಾಗಿ ವರ್ಣಿಸುತ್ತಾ ಓದುಗರಲ್ಲಿ ಆಶ್ಚರ್ಯ, ಭಕ್ತಿ--ಭಾವ, ಶ್ರದ್ಧೆ, ಮೂಡುವಂತಹ ಶೈಲಿ, ನೈಪುಣ್ಯ ವಿಪುಲವಾಗಿದೆ.

ಸೂರ್ಯೋದಯವಾದ ತಕ್ಷಣ ಹೇಗೆ ಕತ್ತಲೆಯು ಹೋಗುತ್ತದೋ ಹಾಗೆಯೇ ಹಯವದನನನ್ನು ಅನನ್ಯ ಭಕ್ತಿಯಿಂದ ಶರಣು ಹೊಂದಿದವರ ಸರ್ವಾನಿಷ್ಟವೂ ಸ್ವಾಮಿಯ ಅನುಗ್ರಹದಿಂದ ನಾಶವಾಗುವುದರಲ್ಲಿ ಸಂಶಯವಿಲ್ಲವೆಂದಿದ್ದಾರೆ ಸ್ವಾಮಿಗಳು.

ಭಕ್ತನಾದ ಇಂದ್ರನಿಗಾಗಿ ಮೇಲೆತ್ತಿದ ಪಾದವುಳ್ಳ ವಾಮನನಾಗಿಯೂ, ದುಷ್ಟ ಕ್ಷತ್ರಿಯರನ್ನು ಕೊಡಲಿಯಿಂದ ಛೇದಿಸಿದ 'ಪರಶುರಾಮನಾಗಿಯೂ, ಮಾಡಿದ ಉಪಕಾರವನ್ನು ಸುಗ್ರೀವನು ಅಲಕ್ಷ್ಯಮಾಡಲು ಹನುಮಂತನ ಅಭಿಪ್ರಾಯದಂತೆ ಸುಗ್ರೀವನಲ್ಲಿ ಪ್ರೀತಿ ಮಾಡಿದ ರಘುಪತಿಯೂ, ದಶಕಂಧರನ ಸೈನ್ಯವನ್ನು ಧೂಳೀಪಠಮಾಡಿದ ರಾಮನಾಗಿಯೂ, ಹಾಗೂ ಕಲ್ಕಿಯಾಗಿ ಅವತಾರ ಮಾಡಿ ಕಲಿಯ ಪರಾಕ್ರಮವನ್ನು ಸವೆ ಬಡಿದವನಾಗಿ ಸಮಸ್ತ ಧರ್ಮಸ್ಥಾಪನೆ ಮಾಡಿದುದರಿಂದಲೂ, ಭೂದೇವಿಯ ನಿಮಿತ್ತವಾಗಿ ಸರ್ವ ದುರ್ಜನರನ್ನು ಶಿಕ್ಷಿಸಿ, ದೇವತೆಗಳ ಅಭೀಷ್ಟವನ್ನು ನೆರವೇರಿಸಿಕೊಡುವಂತೆ ಸರ್ವಸ್ವಾಮಿಯಾದ ಹಯವದನನನ್ನು ವಾದಿರಾಜರು ಭಕ್ತಿಯಿಂದ ನಮಸ್ಕರಿಸುತ್ತಾರೆ.

ಎಲೈ, ಹಯವದನಸ್ವಾಮಿಯೇ ನೀನೇ ನನ್ನ ತಂದೆ, ತಾಯಿ, ಜ್ಞಾನದಾತನೂ ಆಗಿದ್ದು ಹಾಗೂ ಬ್ರಹ್ಮದೇವರ ಸತ್ರಯಾಗದಲ್ಲಿ ಹುಟ್ಟಿದ ನಿನಗೆ ನಮಸ್ಕಾರ ಮಾಡುತ್ತೇನೆ ಎಂದಿದ್ದಾರೆ.

ಕರ್ತ್ರೇ ಧರ್ತ್ರೇ ಚ ಸಂಹರ್ತ್ರೇ
ಪಾತ್ರೇ ಚ ಹಯವಕ್ತ್ರ ಮೇ
ಪಿತ್ರೇ ಧಾತ್ರೇ ಧಿಯಾಂ ದಾತ್ರೇ
ಸತ್ರೇ ಜತಾಯ ತೇ ನಮಃ

ವಾದಿರಾಜರು ಸಜ್ಜನ ಸರ್ವಜನರಿಗೂ ಅನ್ವಯವಾಗುವಂತೆ ಸದ್ಗುಣಯುಕ್ತನಾದ, ಹೃದಯವನ್ನು ಅರಳಿಸುತ್ತಾ ಮತ್ತು ಅದರಲ್ಲಿನ ಕತ್ತಲನ್ನು ಹೋಗಲಾಡಿಸುತ್ತಾ, ಅದರಲ್ಲಿ ಯಾವಾಗಲೂ ಇರುವ ಚಿಂತಾದೂರನಾದ ರಮಾಕಾಂತನನ್ನು ಸದಾ ಸ್ಮರಿಸುವಂತೆ ಈ ಸ್ತೋತ್ರದಲ್ಲಿಕಳ ಕಳಿಯಿಂದ ಒತ್ತಾಯಿಸಿದ್ದಾರೆ.

ವಿಕಸಂತಂ ಹೃತಧ್ವಾಂತಂ
ಹೃದಿ ಸಂತಂ ಚ ಸಂತತಂ
ಗತ ಚಿಂತಂ ರಮಾಕಾಂತಂ
ಗುಣವಂತಂ ಸ್ಮರಾಂತರ

ಹಯವದನ ಸ್ವಾಮಿ ಸದಾ ರಣೇ ಜೈತ್ರಂ ಅಂದರೆ ಯುದ್ಧದಲ್ಲಿ ಯಾವಾಗಲೂ ಜಯಶೀಲನಾಗುವಂತಹ ಅಸದೃಶ ಸಾಮಾರ್ಥ್ಯ ಉಳ್ಳವನು. ದೇವತೆಗಳ ಸಂಕಷ್ಟಗಳನ್ನು ಅರಿತು ಅದನ್ನು ಪರಿಹಾರ ಮಾಡುವ ಸ್ವಾಮಿ ಹಯವದನನನ್ನು ಸದಾ ಸ್ಮರಿಸಬೇಕೆಂದು ಅಪ್ಪಣೆ ಮಾಡಿದ್ದಾರೆ.

ಎಲ್ಲಾ ಮಾನವರಿಗೂ ಹಾಗೂ ಎಲ್ಲಾ ದೇವತೆಗಳೂ (ರಮಾದೇವಿಯರು, ಬ್ರಹ್ಮದೇವರು, ವಾಯುದೇವರು, ಸರಸ್ವತಿ, ಭಾರತಿ ದೇವಿಯರನ್ನು ಬಿಟ್ಟು) ಸಂದೇಹ, ಭ್ರಮೆ ಇವುಗಳನ್ನು ನಾಶಮಾಡುವ ಯಾವನನ್ನು ದೇವತೆಗಳು -- ಸ್ತೋತ್ರ ಮಾಡುತ್ತಾರೆಯೊ ಅಂತಹವನಾದ ಹಯವದನ ಸ್ವಾಮಿಯನ್ನು ಪ್ರಾರ್ಥಿಸುತ್ತೇನೆಂದು ವಾದಿರಾಜರು ತಿಳಿಸಿರುತ್ತಾರೆ.

ಯಂ ದೇವಾಃ ಛಂದಸಾ ಮಿಶಂ
ಕುಂದೇಂದು ಪ್ರಭಮಿಡಿರೇ
ಸಂದೇಹ ಭ್ರಮ ಛೇತ್ತಾರಂ
ವಂದೇ ತಂ ಹಯ ಕಂಧರಂ

ಹೀಗೆ ವಾದಿರಾಜಸ್ವಾಮಿಗಳು, ಪ್ರಥಮ ವಿಲಾಸದಲ್ಲಿ ಹಯವದನದೇವರ, ವರಾಹ ರೂಪಿಯಾದ ಹರಿಯ ಹಾಗೂ ನಾರಸಿಂಹಸ್ವಾಮಿಯ ಅಪ್ರಾಕೃತಗುಣಸಾಗರನನ್ನು (ಅಪ್ರಾಕೃತ ಗುಣಾಂಬುಧಿಃ)

(36 ನೇ ಪುಟ ನೋಡಿ)

# ವೇದವ್ಯಾಸರು-ವೇದಗಳು

---ಕೆ. ಸಿ. ರಾಮಚಂದ್ರಶರ್ಮ.

ಸಂಸ್ಕೃತದ ಒಂದು ಶ್ಲೋಕ ಮಹರ್ಷಿ ವೇದವ್ಯಾಸರನ್ನು ಈ ರೀತಿ ಸ್ತುತಿಸುತ್ತದೆ.

"ಅಚತುರ್ವದನೋ ಬ್ರಹ್ಮಾ
ದ್ವಿಬಾಹುರಪರೋ ಹರಿಃ
ಅಫಾಲಲೋಚನಶ್ಶಂಭುಃ
ಭಗವಾನ್ ಬಾದರಾಯಣಃ"

ನಾಲ್ಕು ಮುಖವಿಲ್ಲದಿರುವ ಬ್ರಹ್ಮನಾಗಿಯೂ, ಎರಡೇ ಕೈಗಳ ವಿಷ್ಣುವಾಗಿಯೂ, ಹಣೆಯಲ್ಲಿ ಮೂರನೇ ಕಣ್ಣಿಲ್ಲದ ಶಿವನಾಗಿಯೂ ಇರುವ ಬಾದರಾಯಣರು ಸಕಲ ಲೋಕ ಪೂಜ್ಯರು. ಹೀಗೆ ಸ್ತೋತ್ರ ಮಾಡುವ ಶ್ಲೋಕಗಳು ಅನೇಕ ಇವೆ.

ವೇದವೆಂಬುದು ಅಪಾರವಾದ ಜ್ಞಾನರಾಶಿ. ಯಾರೂ ಅದನ್ನು ಸಂಪೂರ್ಣ ತಿಳಿಯಲಾರರು. ಆದರೂ ಯಥಾಶಕ್ತಿ ತಿಳಿಯಲು ಪ್ರಯತ್ನಿಸಬೇಕು. ಈ ಬಗೆಗೆ ತೈತ್ತಿರೀಯ ಬ್ರಾಹ್ಮಣದಲ್ಲಿ ಒಂದು ಸ್ವಾರಸ್ಯಕರವಾದ ಕಥೆ ಇದೆ. ಮಹರ್ಷಿ ಭರದ್ವಾಜರು ಪುರುಷಾಯುಸ್ಸಿನ ಮೂರು ಭಾಗಗಳವರೆವಿಗೂ ಗುರುಕುಲದಲ್ಲಿದ್ದು ವೇದಾಧ್ಯಯನ ಮಾಡಿದರು ಆಗ ಅವರ ಬಳಿಗೆ ಇಂದ್ರನು ಬಂದು "ಮಹರ್ಷಿಯೇ! ನಾನು ಆಯುಸ್ಸಿನ ನಾಲ್ಕನೇ ಭಾಗವನ್ನು ಕೊಡುವೆನು -- ಆಗ ನೀವು ಏನು ಮಾಡುವಿರಿ?" ಎಂದು ಕೇಳಿದ. ಆಗಲೂ "ನಾನು ವೇದಾಧ್ಯಯನವನ್ನು ಮುಂದುವರೆಸುವೆನು. ಸಂಪೂರ್ಣ ವೇದಗಳನ್ನು ಅಧ್ಯಯನ ಮಾಡಿ ಮುಗಿಸುವವರೆಗೂ ಗುರುಕುಲದಲ್ಲಿ ಇರುವೆನು" ಎಂದು ಋಷಿ ವಿಜ್ಞಾಪಿಸಿದರು. ಆಗ ಇಂದ್ರನು ಅವರಿಗೆ ಪರಿಚಯಕ್ಕೆ ಬರದೇ ಇದ್ದ ಮೂರು ವೇದಮಯಗಳಾದ ಪರ್ವತಗಳನ್ನು ಅವರಿಗೆ ಕಾಣುವಂತೆ ಮಾಡಿ, ಅವುಗಳಲ್ಲಿ ಒಂದೊಂದರಿಂದಲೂ ಒಂದೊಂದು ಮುಷ್ಟಿಯನ್ನು ತೆಗೆದುಕೊಂಡು "ನೋಡಿ ಭರದ್ವಾಜರೇ! ಅನಂತಾ ವೈ ವೇದಾಃ --ವೇದಗಳು ಅನಂತ. ನೀವು ಇಲ್ಲಿಯವರೆವಿಗೂ ಅಧ್ಯಯನ ಮಾಡಿರುವುದು ಅವುಗಳಲ್ಲಿ ಮೂರು ಮುಷ್ಟಿಗಳಷ್ಟು ಮಾತ್ರ. ಉಳಿದ ಭಾಗಗಳನ್ನು ತಿಳಿದೇ ಇಲ್ಲ, ಅವುಗಳನ್ನು ಅಧ್ಯಯನ ಮಾಡಿ ಮುಗಿಸಲಾಗುವುದಿಲ್ಲ. ಸರ್ವವೇದ ಸಾರವಾದ ಸಾವಿತ್ರೀ ಮಂತ್ರವನ್ನು ಗ್ರಹಿಸಿ" ಎಂದು ಹೇಳಿ ಅವರಿಗೆ ಸಾವಿತ್ರೀ ಮಂತ್ರವನ್ನು ಉಪದೇಶಿಸಿದರು. ಅಲ್ಪವಾದ ಪುರುಷಾಯುಸ್ಸಿನಲ್ಲಿ ಅಪಾರವಾದ ವೇದಾಧ್ಯಯನವನ್ನು ಮಾಡುವುದು ಶ್ರಮಸಾಧ್ಯ. ಅದಕೋಸ್ಕರ ಮಹರ್ಷಿಗಳು ಪ್ರತಿ ದ್ವಾಪರದಲ್ಲಿ ವೇದಗಳನ್ನು ವಿಂಗಡಿಸುತ್ತಾರೆ. ಹಾಗೆ ವಿಂಗಡಿಸುವುದರಿಂದಲೇ "ವ್ಯಾಸ" ಎಂದು ಹೆಸರು ಉಂಟಾಗುತ್ತದೆ. "ವಿವ್ಯಾಸ ವೇದಾನ್‌ಯಃ ತಸ್ಮಾತ್ ವ್ಯಾಸ ಇತಿಸ್ಮೃತಃ".

ಪ್ರತಿ ದ್ವಾಪರಯುಗದಲ್ಲಿ ಹುಟ್ಟುವ ಇತರ ವ್ಯಾಸರಂತೆಯೇ ಪ್ರಕೃತ ನಮ್ಮ ಕೃಷ್ಣದ್ವೈಪಾಯನರೂ, ವೇದಗಳನ್ನು ಕ್ರಮಪಡಿಸಿದರು. ಇಲ್ಲಿಯವರೆವಿಗೂ ಇಪ್ಪತ್ತೇಳು ಜನ ವೇದ ವಿಭಾಗವನ್ನು ಮಾಡಿ ವ್ಯಾಸರು ಆಗಿಹೋಗಿರುತ್ತಾರೆ. ನಾವು ವಿಚಾರ ಮಾಡುತ್ತಿರುವ ವ್ಯಾಸರು ಇಪ್ಪತ್ತೆಂಟನೆಯವರು. ಇವರೇ ಜಯವೆಂಬ (ಮಹಾಭಾರತ) ಇತಿಹಾಸವನ್ನು ಬರೆದವರು. ಮುಂದಿನ ದ್ವಾಪರದಲ್ಲಿ "ದ್ರೌಣಿ"ರೆಂಬುವರು ಅದಕ್ಕೂ ಮುಂದಿನದರಲ್ಲಿ "ಮುನಿಕೃಷ್ಣ ದ್ವೈಪಾಯನ" ಎಂಬುವರೂ ವ್ಯಾಸರಾಗುವರೆಂಬುದಾಗಿ ವಿಷ್ಣುಪುರಾಣವು ತಿಳಿಸುತ್ತದೆ. ಪ್ರಕೃತ ಇವರಿಗೆ ವೇದಗಳನ್ನು ವಿಭಜಿಸಿದುದರಿಂದ "ವೇದವ್ಯಾಸರೆಂದೂ", ದ್ವೀಪವೊಂದರಲ್ಲಿ ಜನಿಸುದುದರಿಂದ ಇವರಿಗೆ ದ್ವೈಪಾಯನ ಎಂದೂ, ಬದರಿಕಾಶ್ರಮದಲ್ಲಿ ವಾಸವಾಗಿದ್ದುದರಿಂದ ಇವರಿಗೆ ಬಾದಾರಾಯಣ ಎಂದೂ, ಪರಾಶರರ ಮಗನಾದ್ದರಿಂದ "ಪಾರಾಶರ್ಯ" ಎಂದೂ ಹೆಸರು ಬಂದಿದೆ.

"ವ್ಯಾಸಂ ವಸಿಷ್ಠನಪ್ತಾರಂ
ಶಕ್ತೇಃ ಪೌತ್ರಮಕಲ್ಮಷಂ,
ಪರಾಶರಾತ್ಮಜಂ ವಂದೇ
ಶುಕತಾತಂ ತಪೋನಿಧಿಂ"

ಎಂಬ ಶ್ಲೋಕದಿಂದ ವ್ಯಾಸರು ವಸಿಷ್ಠರ ಮೊಮ್ಮಗನ ಮಗ, ಶಕ್ತಿಯ ಮೊಮ್ಮಗ, ಪರಾಶರನ ಮಗ ಮತ್ತು ಶುಕ ಮಹರ್ಷಿಯ ತಂದೆ. ಇದರಿಂದ ತಪೋನುಷ್ಠಾನವು ವ್ಯಾಸರಿಗೆ ವಂಶಕ್ರಮವಾಗಿ ಬಂದುದು ಎಂದು ಸ್ಪಷ್ಟವಾಗುತ್ತದೆ.

ವ್ಯಾಸರ ಮಾತಾಪಿತೃಗಳು ಸತ್ಯವತಿ ಮತ್ತು ಪರಾಶರರು. ಪರಾಶರರು ವಿಷ್ಣುಪುರಾಣ, ಪರಾಶರಸ್ಮೃತಿ ಮುಂತಾದ ಅಮೂಲ್ಯ ಗ್ರಂಥಗಳನ್ನು ಬರೆದವರು. ಸತ್ಯವತಿಯು ಬೆಸ್ತರವನ ಸಾಕುಮಗಳು ಎಂದು ಒಂದು ಕಥೆಯಿಂದ ತಿಳಿದುಬರುತ್ತದೆ. ಅವಳು ರೂಪದಿಂದ ಮತ್ತು ಸತ್ಯಗುಣದಿಂದ ಕೂಡಿ ಪ್ರಕಾಶಿಸುತ್ತಿದುದರಿಂದ ಇವಳನ್ನು "ಸತ್ಯವತಿ" ಎಂದು ಬೆಸ್ತರು ಕರೆದರು.

ವೇದವ್ಯಾಸರು ಜಗತ್ತಿನ ಉಪಕಾರಕ್ಕೋಸ್ಕರ ಅವತರಿಸಿದರು. ಪ್ರತಿ ಮಾನವನ ಹೃದಯದಲ್ಲೂ ಅಡಗಿರುವ ಅವಿವೇಕ, ಅಜ್ಞಾನವನ್ನು ಹೋಗಲಾಡಿಸಿ, ಜ್ಞಾನ, ಜ್ಯೋತಿಯನ್ನು ಬೆಳಗಿಸುವುದೇ ಅವರ ಅವತಾರ ಕರ್ತವ್ಯವಾಗಿತ್ತು.

"ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ" ಎಂಬುದಾಗಿ ಶ್ರುತಿಯು ಧರ್ಮವನ್ನೇ ಜಗತ್ತಿನ ಸ್ಥಿತಿಗೆ ಸಾಧನವನ್ನಾಗಿ ಹೇಳುತ್ತದೆ. ಆ ಧರ್ಮವು ವೇದದಿಂದಲೇ ತಿಳಿಯಲ್ಪಡತಕ್ಕದ್ದು ಎಂಬುದಾಗಿ "ವೇದೋಽಖಿಲೋ ಧರ್ಮ ಮೂಲಮ್" ಎಂಬ ವಾಕ್ಯದಿಂದ ದೃಢಪಡುತ್ತದೆ. ಸ್ಮೃತಿಗಳೂ, ಆಚಾರವೂ ಧರ್ಮದ ಯಥಾರ್ಥ ಜ್ಞಾನವನ್ನು ಉಂಟುಮಾಡಿಕೊಡತಕ್ಕವುಗಳಾಗಿದ್ದರೂ ಅವುಗಳಿಗೆ ಧರ್ಮದ ವಿಷಯದಲ್ಲಿ ವೇದದ ಮೂಲಕವೇ ಪ್ರಾಮಾಣ್ಯವೇ ಹೊರತು ಸ್ವತಂತ್ರವಾಗಿ ಅಲ್ಲ.

ವೇದವ್ಯಾಸರು ಈ ಅಪಾರವಾದ ವೇದರಾಶಿಯನ್ನು ಅತ್ಯಲ್ಪವಾದ ಆಯುಷ್ಯದಲ್ಲಿ ಒಬ್ಬ ವ್ಯಕ್ತಿಯು ಅಧ್ಯಯನ ಮಾಡಲು ಆಗುವುದಿಲ್ಲ ಎಂದು ನಾಲ್ಕು ವೇದಗಳಾಗಿ ವಿಭಾಗ ಮಾಡಿರುತ್ತಾರೆ. ಅಧ್ಯಯನ ಮಾಡಬೇಕಾದ ಭಾಗವನ್ನು ಅವನವನ ಗೋತ್ರ, ಶಾಖೆ ಇವುಗಳಿಗನುಗುಣವಾಗಿ ವಿಭಜಿಸಿದರು. ಈಗಿನ ಕಾಲದಲ್ಲಿ ವೇದಾಧ್ಯಯನವೇ ಕ್ಷೀಣಿಸುತ್ತಿದೆ. "ಪೂರ್ವಂ ಭಗವತಾ ವೇದವ್ಯಾಸೇನ ಜಗದುಪಕಾರಾರ್ಥಂ ಏಕೀ ಭೂಯಾಸ್ಥಿತಾಃ ವೇದಾಃ ವ್ಯಸ್ತಾಃ ಶಾಖಾಶ್ಚ ಪರಿಚ್ಛಿನ್ನಾಃ"

ಭಗವಾನ್ ವ್ಯಾಸರು ಅಖಂಡವಾಗಿದ್ದ ವೈದಿಕ ವಾಙ್ಮಯವನ್ನು ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವವೇದವೆಂದು ನಾಲ್ಕಾಗಿ ವಿಭಾಗಮಾಡಿ ಒಬ್ಬೊಬ್ಬ ಶಿಷ್ಯರ ಮೂಲಕ ಒಂದೊಂದು ವೇದದ ಪರಂಪರೆ ಮುಂದುವರಿಯುವಂತೆ ಮಾಡಿ

ದರು. ಪೈಲರನ್ನು ಋಗ್ವೇದಕ್ಕೂ, ವೈಶಂಪಾಯನರನ್ನು ಯಜುರ್ವೇದಕ್ಕೂ ಜೈಮಿನಿಗಳನ್ನು ಸಾಮವೇದಕ್ಕೂ ಸುಮನ್ತುಗಳನ್ನು ಅಥರ್ವವೇದಕ್ಕೂ ಸ್ವೀಕರಿಸಿ ಕಲಿಸಿ ಬೆಳೆಸಬೇಕೆಂದು ಗೊತ್ತುಮಾಡಿದರು.

ವೇದಗಳನ್ನು ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವವೇದ ಎಂದು ನಾಲ್ಕಾಗಿ ವಿಂಗಡಿಸುವಂತೆಯೇ ಸಂಹಿತಾ, ಬ್ರಾಹ್ಮಣ ಮತ್ತು ಆರಣ್ಯಕೋಪನಿಷತ್ತು ಎಂದು ಮೂರು ಭಾಗಗಳಾಗಿ ವಿಂಗಡಿಸುವುದೂ ಉಂಟು. ವೇದಗಳಿಗೆ "ತ್ರಯಿ" ಎಂದು ಹೆಸರು ಬರಲು ಈ ಮುಬ್ಭಾಗವೂ ಒಂದು ಕಾರಣ ಎಂದು ವಿದ್ವಾಂಸರ ಅಭಿಪ್ರಾಯವಾಗಿದೆ.

ಋಗ್ವೇದ ಸಂಹಿತೆಯನ್ನು ಅಧ್ಯಯನ ಸೌಕರ್ಯಕ್ಕಾಗಿ ಹತ್ತು ಭಾಗಗಳನ್ನಾಗಿ ಮಾಡಲಾಗಿದೆ. ಅವುಗಳಿಗೆ "ಮಂಡಲಗಳು" ಎಂದು ಹೆಸರು. ಪ್ರತಿಯೊಂದು ಮಂಡಲದಲ್ಲಿಯೂ ಮುಖ್ಯವಾಗಿ ಒಬ್ಬ ಋಷಿ ಮತ್ತು ಒಡ್ಡೊಬ್ಬ ದೇವತೆಯು ಇರುತ್ತಾನೆ. ಕೆಲವು ಕಡೆ ಅನೇಕ ಋಷಿಗಳು ಮತ್ತು ಒಬ್ಬನೇ ದೇವತೆ ಇರುವ ಮಂಡಲಗಳು ಉಂಟು. ಪ್ರತಿಯೊಂದು ಮಂಡಲವನ್ನು ಅನುವಾಕಗಳನ್ನಾಗಿಯೂ, ಅನುವಾಕಗಳನ್ನು ಸೂಕ್ತಗಳನ್ನಾಗಿಯೂ ವಿಂಗಡಿಸಲಾಗಿದೆ. ಸಾಮಾನ್ಯವಾಗಿ ಒಂದೇ ದೇವತೆಯನ್ನು ಉದ್ದೇಶಿಸಿದ ಮಂತ್ರಗಳ ಸಮುದಾಯವು "ಸೂಕ್ತ" ಎಂದೆನಿಸಿಕೊಳ್ಳುತ್ತದೆ. ಕೆಲವು ಮಂಡಲಗಳು ದೊಡ್ಡದಾಗಿಯೂ ಕೆಲವು ಚಿಕ್ಕದಾಗಿಯು ಇವೆ. ಆದುದರಿಂದ ಅಧ್ಯಯನ ಸೌಕರ್ಯಕ್ಕಾಗಿ ಎಂಟು ಅಷ್ಟಕಗಳನ್ನಾಗಿ ವಿಂಗಡಿಸಿದ್ದಾರೆ. ಒಂದೊಂದು ಅಷ್ಟಕದಲ್ಲಿ ಎಂಟೆಂಟು ಅಧ್ಯಾಯಗಳಿವೆ.

ಒಟ್ಟು ಋಗ್ವೇದದಲ್ಲಿ ೧೦ ಮಂಡಲಗಳು, ೮೫ ಅನುವಾಕಗಳು, ೧೦೨೮ ಸೂಕ್ತಗಳು, ೧೦,೫೫೨ ಮಂತ್ರಗಳು ಇವೆ. ಅವುಗಳಲ್ಲಿ ಹನ್ನೊಂದು ಸೂಕ್ತಗಳು "ವಾಲಖಿಲ್ಯ" ಸೂಕ್ತಗಳು. ಇದಲ್ಲದೆ "ಖಿಲ" ಎಂದು ಕರೆಯಲ್ಪಡುವ ಮುವತ್ತಾರು ಸೂಕ್ತಗಳು ಉಂಟು. ವಿಶೇಷ ಕಾರಣಗಳಿಂದ ಋಗ್ವೇದದಲ್ಲಿ ಸೇರಿಸಲ್ಪಟ್ಟಿರುವ ಸೂಕ್ತಗಳು. ಇವುಗಳನ್ನು ಪರಿಶಿಷ್ಟ ಎಂದೂ ಕರೆಯುತ್ತಾರೆ. ಶ್ರೀ ಸೂಕ್ತ, ರಾತ್ರಿಸೂಕ್ತ ಇತ್ಯಾದಿಗಳು "ಖಿಲ ಸೂಕ್ತಗಳು".

ಯಜ್ಞದಲ್ಲಿ ಭಾಗವಹಿಸುವ ಋಗ್ವೇದದ ಋತ್ವಿಜನಿಗೆ "ಹೋತಾ" ಎಂದು ಕರೆಯುತ್ತಾರೆ. ಆದ್ದರಿಂದ ಋಗ್ವೇದವನ್ನು "ಹೋತಾವೇದ"ವೆಂದೂ ಯಜುರ್ವೇದವನ್ನು "ಅಧ್ವರ್ಯುವೇದ"ವೆಂದೂ ಸಾಮವೇದವನ್ನು "ಉದ್ಗಾತೃವೇದ" ವೆಂದೂ, ಅಥರ್ವವೇದವನ್ನು "ಬ್ರಹ್ಮವೇದ"ವೆಂದೂ ಕರೆಯುತ್ತಾರೆ.

ಛಂದಸ್ಸಿನಿಂದ ಕೂಡಿ ನಿಯುತವಾದ ಅಕ್ಷರಗಳನ್ನೊಳಗೊಂಡು ಪಾದ ವ್ಯವಸ್ಥೆಯಿರುವ ಮಂತ್ರಗಳು "ಋಕ್" ಎನ್ನಿಸಿಕೊಳ್ಳುತ್ತವೆ. ಗಾನದಿಂದ ಒಳಗೊಂಡ ಋಕ್‌ಗಳು "ಸಾಮ" ಎನಿಸಿಕೊಳ್ಳುತ್ತದೆ. ಇವೆರಡೂ ಇಲ್ಲದ ಮಂತ್ರಗಳು "ಯಜುಸ್ಸುಗಳು". ಯಜುರ್ವೇದದಲ್ಲಿ ಶುಕ್ಲ ಮತ್ತು ಕೃಷ್ಣ ಯಜುರ್ವೇದಗಳೆಂಬ ಎರಡು ಭಾಗಗಳಿವೆ. ಕೃಷ್ಣ ಯಜುರ್ವೇದದಲ್ಲಿ ಮಂತ್ರ ಮತ್ತು ಬ್ರಾಹ್ಮಣ ಮಿಶ್ರಣವಿದೆ. ಶುಕ್ಲಯಜುರ್ವೇದದಲ್ಲಿ ಮಂತ್ರಗಳ ಆಳವಡಿಕೆಯು ಒಂದೇ ಕಡೆಗೆ ಇದೆ. ನಾಲ್ಕೂ ವೇದಗಳಿಗೂ ಭಾಷ್ಯವನ್ನು ರಚಿಸಿದ ಮಹಾಮಹಿಮರಾದ "ಸಾಯಣಾಚಾರ್ಯರು" ವೇದಗಳಿಗೆ ಭಾಷ್ಯವನ್ನು ಬರೆಯಲು ತೊಡಗಿದಾಗ ಮೊದಲು ಯಜುರ್ವೇದಕ್ಕೆ ಭಾಷ್ಯವನ್ನು ಬರೆದು ಅನಂತರ ಋಗ್ವೇದಕ್ಕೂ, ಬಳಿಕ ಸಾಮವೇದಕ್ಕೂ ಅನಂತರ ಅಥರ್ವವೇದಕ್ಕೂ ಭಾಷ್ಯವನ್ನು ಬರೆದರು. ಯಜುರ್ವೇದಕ್ಕೆ ಮೊದಲು ಭಾಷ್ಯ ಏಕೆ ರಚಿಸುತ್ತಿರುವರೆಂದು ಯುಕ್ತಿಪೂರ್ವಕವಾಗಿ ಸಮರ್ಥಿಸುತ್ತಾರೆ. ಅವರ ಮಾತಿನಂತೆ "ಎಲ್ಲ ವೇದಗಳನ್ನು ಅಧ್ಯಯನ ಮಾಡುವ ಸಂದರ್ಭದಲ್ಲಿಯೂ ಅವುಗಳನ್ನು ಪಾರಾಯಣ ಮಾಡುವಾಗಲೂ, ಬ್ರಹ್ಮಯಜ್ಞದಲ್ಲಿಯೂ ಋಗ್ವೇದಕ್ಕೆ ಪ್ರಾಧಾನ್ಯವಿರಲಿ. ಆದರೆ ಯಜ್ಞಗಳನ್ನು ಅನುಷ್ಠಿಸುವುದಕ್ಕಾಗಿ ವೇದಾರ್ಥವನ್ನು ತಿಳಿಯುವುದರಿಂದ ಯಜ್ಞದಲ್ಲಿ ಯಜುರ್ವೇದಕ್ಕೆ ಪ್ರಾಧಾನ್ಯವಿರುವುದರಿಂದ ಮೊದಲು ಯಜುರ್ವೇದವನ್ನೇ ವ್ಯಾಖ್ಯಾನಿಸುವುದು ಯುಕ್ತ" ಎಂದು ಸಮರ್ಥಿಸುತ್ತಾರೆ. "ವೇದಾಹಿ ಯಜ್ಞಾರ್ಥ ಮಭಿಪ್ರವೃತ್ತಾಃ" ಮತ್ತು "ಯಜ್ಞೋಹಿ ಶ್ರೇಷ್ಠ ತಮಂ ಕರ್ಮ" ಎಂಬ ವಾಕ್ಯಗಳಿಂದ ಅದು ದೃಢವಾಗುತ್ತದೆ. ಯಜುರ್ವೇದದಲ್ಲಿ ೧೦೧ ಶಾಖೆಗಳಿದ್ದರೂ ಇಂದು ತೈತ್ತಿರೀಯ, ಮೈತ್ರಾಯಣೀಯ ಮತ್ತು ಕಾಠಕಗಳೆಂಬ ಮೂರು ಕೃಷ್ಣಯಜುರ್ವೇದದ ಶಾಖೆಗಳು ಮತ್ತು ಕಾಣ್ವ ಮತ್ತು ಮಾಧ್ಯಂದಿನ ಎಂಬ ಎರಡು ಶುಕ್ಲಯಜುರ್ವೇದದ ಶಾಖೆಗಳು ಮಾತ್ರ ಉಳಿದಿವೆ.

ಯಜುರ್ವೇದದ ತೈತ್ತಿರೀಯ ಶಾಖೆಯಲ್ಲಿ ೭ ಕಾಂಡಗಳಿರುತ್ತವೆ, ೪೪ ಪ್ರಶ್ನೆಗಳಿರುತ್ತವೆ, ೬೫೧ ಅನುವಾಕಗಳಿರುತ್ತವೆ, ೨೧೯೮ ಹನಸ್ಸು, ೧೯,೨೯೦ ಪದಗಳು, ೨,೫೩,೮೬೮ ಅಕ್ಷರಗಳಿರುತ್ತವೆ ಎಂದು ಹೇಳಲಾಗಿದೆ. ತೈತ್ತಿರೀಯ ಬ್ರಾಹ್ಮಣ ಗ್ರಂಥದಲ್ಲಿ ೧೯,೪೮೮ ವಾಕ್ಯಗಳಿವೆ ಎಂದು ಪರಿಗಣಿಸಿದ್ದಾರೆ.

ಋಕ್ಕುಗಳಿಗೆ ಗಾನವನ್ನು ಅಳವಡಿಸಿದಾಗ ಅದನ್ನು ಸಾಮವೆಂದು ಕರೆಯುತ್ತಾರೆ. ಋಗ್ವೇದದ ಮಂತ್ರಗಳೇ ಬಹುಮಟ್ಟಿಗೆ ಸಾಮವೇದದಲ್ಲಿ ಇವೆ. ಸಾಮವೇದದ ಸಂಹಿತೆಯಲ್ಲಿ ಪೂರ್ವಾರ್ಚಿಕ ಮತ್ತು ಉತ್ತರಾರ್ಚಿಕ ಎಂದು ಎರಡು ಭಾಗಗಳಿವೆ. ಪೂರ್ವಾರ್ಚಿಕ ಸಾಮಗಳನ್ನು ಪ್ರಕೃತಿ ಎಂದೂ, ಉತ್ತರಾರ್ಚಿಕದ ಸಾಮಗ್ರಂಥವನ್ನು ರಹಸ್ಯ ಎಂದೂ ಕರೆಯುತ್ತಾರೆ.

ಸಾಮವೇದದಲ್ಲಿ ಇರುವ ೧೫೪೯ ಮಂತ್ರಗಳಲ್ಲಿ ೭೫ ಮಂತ್ರಗಳನ್ನು ಬಿಟ್ಟರೆ ಉಳಿದೆಲ್ಲವೂ ಋಗ್ವೇದದ ಮಂತ್ರಗಳೇ ಆಗಿವೆ. ಸಾಮವೇದದ ಅಧ್ಯಯನವು ಗಾನಪ್ರಧಾನವಾದುದರಿಂದ ಇದರಲ್ಲಿ ಏಳು ಸ್ವರಗಳಿವೆ. ಸಂಗೀತದಲ್ಲಿ ಗುರುತಿಸುವ ಪಂಚಮ, ಮಧ್ಯಮ, ಗಾಂಧಾರ, ಋಷಭ, ಷಡ್ಜ, ದೈವತ ಮತ್ತು ನಿಷಾದಗಳಿಗೆ ಅನುಗುಣವಾಗಿ ಸಾಮವೇದದಲ್ಲಿ ಪ್ರಥಮ, ದ್ವಿತೀಯಾ, ತೃತೀಯಾ, ಚತುರ್ಥ, ಪಂಚಮ ಮತ್ತು ಷಷ್ಠ, ಸಪ್ತಮ ಎಂದು ಹೆಸರು. ಭಗವಂತ ಗೀತೆಯಲ್ಲಿ "ವೇದಾನಾಂ ಸಾಮವೇದೋಽಸ್ಮಿ" ಎಂದು ಸಾಮವೇದವನ್ನು ಶ್ರೇಷ್ಠವೇದವೆಂದು ಸೂಚಿಸುತ್ತಾರೆ.

ಅಥರ್ವವೇದವನ್ನು "ಅಥರ್ವಾಂಗಿರಸ", "ಭೃಗ್ವಂಗಿರಸ"ಎಂದೂ ಕರೆಯುತ್ತಾರೆ. ಅಥರ್ವವೇದದಲ್ಲಿ ಅಭಿಚಾರಕೃತ್ಯಗಳಿಗೆ ಸಂಬಂಧಿಸಿದ ಮಂತ್ರಗಳೇ ಇವೆಯೆಂಬ ಕಲ್ಪನೆ ಇದೆ. ಅದು ಸರಿಯಲ್ಲ. ಶರೀರಶಾಸ್ತ್ರ, ಶತ್ರುರಕ್ಷಣೆಗಾಗಿ ಹೇಳದೇಕಾದ ಮಂತ್ರಗಳೂ ಅಥರ್ವವೇದದಲ್ಲಿವೆ. ರಾಜಪುರೋಹಿತನು ಅಥರ್ವವೇದವನ್ನು ಅವಶ್ಯವಾಗಿ ತಿಳಿದಿರಲೇಬೇಕಾಗಿತ್ತು. ಅಥರ್ವವೇದದಲ್ಲಿ ೨೦ ಭಾಗಗಳಿವೆ. ೭೩೧ ಸೂಕ್ತಗಳು ಮತ್ತೂ ೧೨ ಸಾವಿರ ಮಂತ್ರಗಳೂ ಇವೆ. ಛಂದಸ್ಸಿನ ನಿಯಮವು ಋಗ್ವೇದದಲ್ಲಿ ಇರುವಷ್ಟು ಬಿಗಿಯಾಗಿ ಇದರಲ್ಲಿ ಇಲ್ಲ. ಇದನ್ನು "ಬ್ರಹ್ಮವೇದ" ವೆಂದೂ ಕರೆಯುತ್ತಾರೆ.

ಋಗ್ವೇದಕ್ಕೆ "ಐತರೇಯ" ಮತ್ತು "ಕೌಷೀತಕೀ" ಎಂಬ ಬ್ರಾಹ್ಮಣಗಳು. ಶುಕ್ಲಯಜುರ್ವೇದದಲ್ಲಿ ಶತಪಥ ಬ್ರಾಹ್ಮಣ ಮತ್ತು ಕೃಷ್ಣಯಜುರ್ವೇದದಲ್ಲಿ ತೈತ್ತಿರೀಯ ಬ್ರಾಹ್ಮಣವು ಪ್ರಸಿದ್ಧವಾಗಿವೆ. ಸಾಮವೇದದಲ್ಲಿ "ತಾಂಡ್ಯ ಬ್ರಾಹ್ಮಣ" ಮತ್ತು ಅಥರ್ವವೇದದಲ್ಲಿ "ಗೋಪಥ ಬ್ರಾಹ್ಮಣಗಳು" ಇವೆ. ಋಗ್ವೇದದ ಐತರೇಯ ಆರಣ್ಯಕವೂ ಅಧ್ಯಯನದಲ್ಲಿ ಇವೆ. ಉಪನಿಷತ್ತುಗಳಲ್ಲಿ ಹತ್ತು ಪ್ರಸಿದ್ಧ, ಈಶ -- ಕೇನ -- ಕಠ

-- ಪ್ರಶ್ನ -- ಮುಂಡ -- ಮಾಂಡೂಕ್ಯ -- ತ್ರಿತ್ತಿರಿಃ, ಐತರೇಯಂ ಚ ಛಾಂದೋಗ್ಯಂ ಬೃಹದಾರಣ್ಯ -- ಕಂ ವಶ" ಹೆಚ್ಚು ಉಪನಿಷತ್ತುಗಳಿಗೆ ಸಸ್ವರ ಪಾಠವು ಕಂಡು ಬರುವುದಿಲ್ಲ.

ಮುಖ್ಯವಾಗಿ ವೇದಮಂತ್ರಗಳ ಬಗ್ಗೆ ಕೆಲವು ಅಂಶಗಳನ್ನು ವಿಶೇಷವಾಗಿ ಗಮನದಲ್ಲಿಡಬೇಕು. ವೇದವಾಙ್ಮಯ ಅಪೌರುಷೇಯವಾದುದು, ಭಾಷೆ ಸಂಸ್ಕೃತವೇ ಆದರೂ, ಲೌಕಿಕ ಸಂಸ್ಕೃತದಂತಲ್ಲ. ಆದುದರಿಂದಲೇ ಒಂದಕ್ಷರವನ್ನು ಸೇರಿಸುವುದಕ್ಕಾಗಲಿ, ತೆಗೆದು ಹಾಕುವುದಕ್ಕಾಗಲಿ ಯಾರಿಗೂ ಅಧಿಕಾರವಿಲ್ಲ. ಆಯಾ ಅಕ್ಷರಗಳ ಉತ್ಪತ್ತಿಸ್ಥಾನ, ಪ್ರಯತ್ನಗಳಿಗೆ ಅನುಗುಣವಾಗಿ ಸ್ಪಷ್ಟವಾಗಿ, ಶಬ್ದಗಳನ್ನು ಉಚ್ಚರಿಸಬೇಕು. ಈ ಶಬ್ದಗಳಿಗೆ ಉದಾತ್ತಾದಿ ಸ್ವರಗಳು ನಿಯತವಾಗಿದೆ. ಆ ಸ್ವರಗಳನ್ನು ಚಾಚೂ ವ್ಯತ್ಯಾಸವಾಗಿದಂತೆ ಹಿಂದಿನ ಪರಂಪರೆ ರಕ್ಷಿಸಿಕೊಂಡು ಬಂದಿದೆ. ಅದು ಕೇವಲ ಅಧ್ಯಯನ ಮಾತ್ರದಿಂದಲೇ ಸಿದ್ಧಿಸುವ ವಿಷಯ. ಈ ಸ್ವರಗಳಿಗೆ ಶಬ್ದೋಚ್ಚಾರಣೆಯಂತೆಯೇ ವಿಶೇಷ ಸ್ಥಾನವನ್ನು ಕೊಡಲಾಗಿದೆ. ಸ್ವಲ್ಪ ಸ್ವರ ವ್ಯತ್ಯಾಸವಾದರೂ ಅನರ್ಥವಾಗುವ ಸಂಭವವುಂಟು. ಆದುದರಿಂದ ಮಂತ್ರಗಳ ಸ್ವರಚಿಹ್ನೆಗಳನ್ನು ಗಮನಿಸಿ ಕಲಿಯಲು ಪ್ರಯತ್ನಿಸಬಾರದು. ಬಲ್ಲವರಿಂದ ಹೇಳಿಸಿಕೊಂಡೇ ಅಧಿಕಾರಿಗಳು ಕಲಿಯಬೇಕು.

ಮಹಾಭಾರತದ ನಿರ್ಮಾಣವು ವ್ಯಾಸರ ಮಹೋಪಕಾರಗಳಲ್ಲಿ ಒಂದು. ಮಹಾಭಾರತದ ಕಥೆಯ ಜೊತೆಯಲ್ಲೇ ವ್ಯಾಸರು ಬೆಳೆದು ಅನುಭವಗಳನ್ನು ಸ್ವಯಂ ಪಡೆದು ಇತಿಹಾಸಕಾರನ ಕೆಲಸವನ್ನು ನಿರ್ವಹಿಸಿದ್ದಾರೆ. ಮಹಾಭಾರತವು ಹೆಚ್ಚಾಗಿ ಅನುಷ್ಟುಪ್ ಛಂದಸ್ಸಿನಲ್ಲಿ ಇದ್ದು ಆದಿಪರ್ವ, ಸಭಾಪರ್ವ ಮೊದಲಾಗಿ ಹದಿನೆಂಟು ಪರ್ವಗಳಿಂದ ಕೂಡಿದೆ.

ಇದರ ಭೀಷ್ಮಪರ್ವದಲ್ಲಿ ಮಹತ್ವಪೂರ್ಣವಾದ ಭಗವದ್ಗೀತೆಯ ಪ್ರಕರಣವಿದೆ. ಪವಿತ್ರವಾದ ಈ ಮಹಾಗ್ರಂಥವನ್ನು ವೇದವ್ಯಾಸರು ಮಹಾಗಣಪತಿಯ ಮೂಲಕ ಬರೆಸಿದರು.

ಮಹಾಭಾರತವನ್ನು ಅಧ್ಯಯನ ಸಮಯದಲ್ಲಿ ವೇದವ್ಯಾಸರೆಂಬ ಹೆಸರನ್ನು ಸ್ಮರಿಸುತ್ತೇವೆ. ಹಾಗೆಯೇ ಬ್ರಹ್ಮಸೂತ್ರಗಳನ್ನು ಚಿಂತಿಸುವಾಗ ಬಾದರಾಯಣರೆಂಬ ಹೆಸರನ್ನು ಸ್ಮರಿಸುವುದು ರೂಢಿಯಲ್ಲಿ ಬಂದಿದೆ. ಜಗತ್ತಿನ ಮೂಲ ಕಾರಣವಾದ ಪರಬ್ರಹ್ಮತತ್ವವನ್ನು ತಿಳಿಯಲು ಬಾದರಾಯಣರು ಬ್ರಹ್ಮಸೂತ್ರಗಳನ್ನು ರಚಿಸಿದರು. ಪದಗಳು ಅತ್ಯಂತ ಕಡಿಮೆಯಿದ್ದು ಅರ್ಥಗೌರವದೊಂದಿಗೆ ಕೂಡಿರುವುದರಿಂದ ಈ ಸೂತ್ರಗಳು ಅರ್ಥಮಾಡಿಕೊಳ್ಳುವುದು ಕಷ್ಟಸಾಧ್ಯವಾದ ಕೆಲಸವೇ ಆಗಿದೆ. ಅದಕ್ಕೋಸ್ಕರವೇ ಶಂಕರಭಾಗತ್ಪಾದರು, ರಾಮಾನುಜರು, ಆನಂದತೀರ್ಥರು ಈ ಸೂತ್ರಗಳ ಮೇಲೆ ವಿವರವಾಗಿ ಭಾಷ್ಯವನ್ನು ಬರೆದಿರುತ್ತಾರೆ. ಉಪನಿಷತ್ತುಗಳು, ಭಗವದ್ಗೀತೆ ಮತ್ತು ವೇದಾಂತ ಸೂತ್ರಗಳಿಗೆ ಪ್ರಸ್ಥಾನತ್ರಯವೆಂದು ಕರೆಯುತ್ತಾರೆ.

ವೇದದ ಅರ್ಥವನ್ನು ವಿವರಿಸುವ ಶಾಸ್ತ್ರಕ್ಕೆ ಮೀಮಾಂಸೆಯೆಂದು ಹೆಸರು. ಇದರಲ್ಲಿ ವೇದಗಳ ಕರ್ಮಕಾಂಡವು ಪೂರ್ವಮೀಮಾಂಸೆಯೆಂದು ಉಪನಿಷತ್ತುಗಳು ವೇದಗಳ ಉತ್ತರಭಾಗವಾಗಿದ್ದು ಅವುಗಳಿಗೆ ಉತ್ತರಮೀಮಾಂಸೆಯೆಂದು ಹೆಸರು.

ವೇದವ್ಯಾಸರ ಪೂಜೆಯನ್ನು ವರ್ಷದಲ್ಲಿ ಆಷಾಢಶುದ್ಧ ಪೂರ್ಣಿಮಾ, ಕಾರ್ತಿಕ ಶುದ್ಧ ಪೂರ್ಣಿಮಾ ಮತ್ತು ಮಾಘಶುದ್ಧ ಪೂರ್ಣಿಮಾ ದಿನಗಳಲ್ಲಿ ಆಚರಿಸುತ್ತೇವೆ. ಆಷಾಢ ಶುದ್ಧ ಪೂರ್ಣಿಮಾ ದಿನ ಗುರು ಪೂರ್ಣಿಮಾ ಎಂದು ವಿಶೇಷವಾಗಿ ಆಚರಿಸುವುದು ಸಂಪ್ರದಾಯದಲ್ಲಿದೆ. ಆ ದಿನ ತ್ರಿಮತಸ್ಥರು ಶ್ರದ್ಧಾಭಕ್ತಿಗಳಿಂದ ವ್ಯಾಸರನ್ನು ಸ್ಮರಿಸಿ ಅರ್ಚಿಸುವುದು ರೂಢಿಯಲ್ಲಿದೆ.

ತನ್ನ ಸ್ವರೂಪವನ್ನು ತಿಳಿಯುವುದೇ ಮಾನವನಿಗೆ ಪರಮಪುರುಷಾರ್ಥ. ಅದನ್ನು ಅರಿತರೆ ಅವನು ವಿಶ್ವಮಾನವ ಮತ್ತು ವಿಶ್ವಕುಟುಂಬಿಯಾಗುತ್ತಾನೆ. ಪ್ರತಿ ಮಾನವನಿಗೂ ವಿಶ್ವಪ್ರೇಮದ ಈ ಆನಂದ ದೊರಕಬೇಕೆಂಬುದೆ ವೇದವ್ಯಾಸರ ಮಹದಾಕಾಂಕ್ಷೆ. ಅವರ ಜೀವನ, ಕೃತಿ ಎಲ್ಲವೂ ಈ ಮಹತ್‌ಕಾರ್ಯಕ್ಕೆ ಮುಡುಪಾಗಿ ಇಡಲ್ಪಟ್ಟವು. ಅವರ ಜ್ಞಾನ, ತ್ಯಾಗ, ವೈರಾಗ್ಯ ಪೂರ್ಣ ಜೀವನ ಇವೆಲ್ಲವು ಇದನ್ನೇ ಪ್ರತಿಧ್ವನಿಸುತ್ತದೆ. ನಾವು ಆ ದಿಕ್ಕಿನಲ್ಲಿ ಪ್ರಯಾಣ ಬೆಳಸುವುದೇ ವೇದವ್ಯಾಸರಿಗೆ ನಾವು ಸಮರ್ಪಿಸುವ ಗುರು ದಕ್ಷಿಣೆ.

|| ಶುಭಂ ಭೂಯಾತ್ ||



---

(33 ನೇ ಪುಟದಿಂದ)

ಹಾಗೂ ಶ್ರೀಕೃಷ್ಣನ ಮಹಿಮೆಯನ್ನು ವರ್ಣಿಸುತ್ತಾ ಈ ವರ್ಣನೆಯು ಶ್ರೀಹರಿಗೆ ಪ್ರಿಯವಾಗಿದೆ ಎಂದು ಈ ಸ್ತೋತ್ರದಲ್ಲಿ ತಿಳಿಸಿರುತ್ತಾರೆ.

ವಾದಿರಾಜ ಕೃತೇ ಶ್ರಾವ್ಯೇ
ಕಾವ್ಯೇ ಭವ್ಯೇ ಸುಬುದ್ಧಿಭಿಃ
ಸೇವ್ಯೇ ಸರಸ ಭಾರತ್ಯಾಂ
ವಿಲಾಸೋ ಭೂಧ್ಧರಿಪ್ರಿಯಃ

ಈ ರೀತಿಯಲ್ಲಿ ಇಡೀ ಕೃತಿ ಗುರುರಾಜರ ಅಮೋಘ ಅನುಪಮ, ಶ್ರೇಷ್ಠ ಉತ್ಕೃಷ್ಟ ಉಪಯುಕ್ತ ಗ್ರಂಥವಾಗಿದೆ. ಹಾಗೂ ಇವರ ಸಾರ್ಥಕ ಬರಹ ಗಂಗಾಪ್ರವಾಹದಂತೆ ಶುಭ್ರ ಅರ್ಥಗರ್ಭಿತವಾಗಿ ಹಯವದನ ಸ್ವಾಮಿಯ ಸ್ತೋತ್ರ ಭಕ್ತರ ಉದ್ಧಾರಕ್ಕಾಗಿಯೇ ರಚಿಸಿರುತ್ತಾರೆ. ಈ ಸರಸಭಾರತೀವಿಲಾಸದ ಗ್ರಂಥದಲ್ಲಿ ಮೊದಲನೆ ಸರ್ಗದಲ್ಲಿ ೪೮ ಸ್ತೋತ್ರಗಳಲ್ಲಿ ಹಯವದನ ಸ್ವಾಮಿಯ ವರ್ಣನೆ ಉಕ್ತವಾಗಿದ್ದು, ಮಾನವ ಜನಕ್ಕೆ ಅವನ ಮಹಿಮೆ, ಹಿರಿಮೆ ಅರಿಯಲು ರಾಜರು ಬಹುದೊಡ್ಡ ಉಪಕಾರ ಮಾಡಿರುತ್ತಾರೆ.



# ವಾರ್ತಾಲಹರಿ

## ತಿರುಮಲೆಯಲ್ಲಿ ಯಾತ್ರಿಕ ಸಂದಣಿ

ಡಿಸೆಂಬರ್ ಕಡೆಯವಾರದ ಕೊನೆಯ ದಿನಗಳಲ್ಲಿ ಶುಕ್ರ, ಶನಿ, ಭಾನುವಾರಗಳಲ್ಲಿ ಹೆಚ್ಚು ಜನ ಸಂದಣಿ ಕಂಡುಬಂದಿತು. ಶುಕ್ರವಾರ ಸಂಜೆಯ ಹೊತ್ತಿಗೇ 40 ಸಾವಿರಮಂದಿ ಕ್ಯೂಕಾಂಪ್ಲೆಕ್ಸ್‌ನಿಂದಲೂ 12,000 ಮಂದಿ 30 ರೂ. ಟಿಕೆಟ್ ಪಡೆದೂ ದರ್ಶನ ಪಡೆದಿದ್ದರು. ಸಾಧಾರಣವಾಗಿ ಡಿಸೆಂಬರ್ ಚಳಿಯ ದಿನಗಳಲ್ಲಿ ಯಾತ್ರಿಕರ ಸಂದಣಿ ಇರುವುದಿಲ್ಲವಾದರೂ ಈ ಬಾರಿ ರಾತ್ರಿ ಹನ್ನೊಂದು ಗಂಟೆಯಲ್ಲೂ 8,000 ಮಂದಿ ದರ್ಶನಕ್ಕಾಗಿ ಕಾದಿದ್ದರು. ಇದರಿಂದಾಗಿ 27, 28, 29 ರ ದಿನಾಂಕಗಳಲ್ಲಿ 1,29,12,683 ರೂ.ಗಳ ಆದಾಯವಾಗಿ ಇದರಲ್ಲಿ ಹುಂಡಿಯ ಪಾಲು 89,20,972 ರೂ.ಗಳೂ ಆರ್ಜಿತಸೇವೆಗಳ ಮೂಲಕ 32,13,239 ರೂ.ಗಳೂ ಸೇರಿವೆ. ಒಟ್ಟು 1.60 ಲಕ್ಷ ಮಂದಿ ದರ್ಶನ ಹೊಂದಿದರೆ, 47 ಸಾವಿರಮಂದಿ 30 ರೂ.ಗಳ ಟಿಕೆಟ್ ಪಡೆದು ದರ್ಶನ ಪಡೆದರು.

## ಸ್ಥಳೀಯ ಆಲಯಗಳ ಆದಾಯ

ಹೊಸ ವರ್ಷದ ಸಂದರ್ಭದಲ್ಲಿ ಸ್ಥಳೀಯ ದೇವಾಲಯಗಳಲ್ಲಿ 63,281 ರೂ. ಆದಾಯವಾಗಿದೆಯೆಂದು ತಿ.ತಿ.ದೇ. ಸ್ಥಳೀಯ ದೇವಾಲಯಗಳ ಡೆ.ಇ.ಓ. ಶ್ರೀ ಈ. ಗುರವಯ್ಯ ಅವರು ತಿಳಿಸಿದ್ದಾರೆ. ಸ್ಥಳೀಯ ದೇವಾಲಯಗಳಲ್ಲಿ 16 ರಿಂದ 18 ಗಂಟೆಗಳ ದರ್ಶನಾವಕಾಶ ನೀಡಲಾಯಿತು. ಶ್ರೀ ವೆಂಕಟೇಶ್ವರಸ್ವಾಮಿ ಶ್ರೀ ಪದ್ಮಾವತೀ ಅಮ್ಮನವರ ತ್ರೈಲವರ್ಣಚಿತ್ರದ ಪ್ರತಿಗಳನ್ನು ಭಕ್ತರಿಗೆ ಹಂಚಲಾಯಿತು. ಶ್ರೀನಿವಾಸ ಮಂಗಾಪುರದಲ್ಲಿ 19250 ರೂ., ಕಪಿಲತೀರ್ಥದಲ್ಲಿ 3,800 ರೂ., ತಿರುಚಾನೂರಿನಲ್ಲಿ 20,617 ರೂ., ಶ್ರೀ ಗೋವಿಂದರಾಜಸ್ವಾಮಿ ಆಲಯದಲ್ಲಿ 17,088 ರೂ.ಗಳ ಆದಾಯವೆಂದು ವಿವರಿತವಾಗಿದೆ.

## ಜನವರಿ 1 ರಂದು ತಿರುಮಲೆ

1995 ಜನವರಿ 1 ರಂದು ತಿರುಮಲೆಯಲ್ಲಿ ಹೊಸ ವರ್ಷದ ಪ್ರಯುಕ್ತ ಸ್ವಾಮಿದರ್ಶನಕ್ಕೆ ವ್ಯಾಪಕವಾದ ಏರ್ಪಾಡುಗಳನ್ನು ಮಾಡಲಾಗಿದ್ದಿತು. ಉಚಿತದರ್ಶನದ ಸಾಲು ಶೇಷಾದ್ರಿ ನಗರದ ಉಪವಿಚಾರಣಾ ಕಚೇರಿಯಿಂದ ಆರಂಭವಾಗಿ ವೈಕುಂಠಂ ಕ್ಯೂಕಾಂಪ್ಲೆಕ್ಸ್‌ನಲ್ಲಿ ವಿಶ್ರಾಂತಿ ಪಡೆದು ಸ್ವಾಮಿ ದರ್ಶನಕ್ಕೆ ನಡೆಯಿತಾದರೆ 30 ರೂ.ಗಳ ಸಾಲು ಫಿಲ್ಟರ್ ಹೌಸ್ ನಿಂದಾರಂಭವಾಗಿ, ಪಿ.ಪಿ. ಷೆಡ್‌ಗಳಲ್ಲಿ ವಿಶ್ರಾಂತಿಪಡೆದು ದರ್ಶನಕ್ಕೆ ಮುಂದುವರೆಯಿತು. ಎಲ್ಲೆಡೆ ತಳಿರು ತೋರಣಗಳಿಂದ, ವಿದ್ಯುದ್ದೀಪ ವರ್ಣಚಿತ್ರಗಳಿಂದ ಗೋವಿಂದ ನಾಮ ಘೋಷದಿಂದ ತಿರುಮಲೆ ತುಂಬಿಹೋಗಿದ್ದಿತು.

ಹುಂಡಿಯಿಂದ 38,72,478 ರೂ.ಗಳೂ ಆರ್ಜಿತಸೇವೆಯಿಂದ 10,33,000 ರೂ.ಗಳೂ ಪ್ರಸಾದ ಮಾರಾಟದಿಂದ 3,49,000 ರೂ.ಗಳೂ -- ಒಟ್ಟು 52,54,871 ರೂ.ಗಳ ಆದಾಯವಾಯಿತೆಂದೂ, ಚಿಲ್ಲರೆ ನಾಣ್ಯಗಳು 131 ಚೀಲಗಳಾದವೆಂದೂ (ಇದು 5 ಲಕ್ಷ ರೂಪಾಯಿಗಳೆಂದು ಅಂದಾಜು) ಹೋದ ವರ್ಷದ ಆರಂಭದ ದಿನವಂದು ಆದಾಯ 45,88,995 ರೂ.ಗಳಾಗಿದ್ದಿತು ಎಂದೂ ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ. ವಿ. ಎಲ್. ಎನ್. ಮೂರ್ತಿ ಅವರು ತಿಳಿಸಿದ್ದಾರೆ. ಹೋದವರ್ಷ 97,000 ಮಂದಿ ಸ್ವಾಮಿದರ್ಶನ ಪಡೆದಿದ್ದರೆ, ಈ ವರ್ಷ 1,20,000 ಮಂದಿ ದರ್ಶನ ಪಡೆದರು.

ಜನವರಿ 1 ರಂದು ಸಿಂಗಪುರದ ಶ್ರೀಮತಿ ಲೀಲಾ ಹರಿಹರನ್ ಅವರು ನಿತ್ಯಾನ್ನದಾನ ಯೋಜನೆಗೆ 1ಲಕ್ಷ ರೂ.ಗಳನ್ನೂ, ಅರುಣಕುಮಾರ್ ಅಗರ್ ವಾಲ್ ಅವರು ವನಾಭಿವೃದ್ಧಿ ಯೋಜನೆಗೆ 1 ಲಕ್ಷ ರೂ.ಗಳನ್ನೂ ದಾನ ನೀಡಿದ್ದಾರೆ ಎಂದೂ ಶ್ರೀ ಡಿ.ವಿ. ಎಲ್.ಎನ್. ಮೂರ್ತಿ ಅವರು ತಿಳಿಸಿದ್ದಾರೆ.

## ಸಂಕ್ರಾಂತಿಯ ಪಾರ್ವೇಟಿ ಉತ್ಸವ

ತಿರುಮಲೆಯಲ್ಲಿ ಸಂಕ್ರಾಂತಿ ಉತ್ಸವಗಳ ಭಾಗವಾಗಿ ಜನವರಿ 16 ರಂದು ಸ್ವಾಮಿಯ ಪಾರ್ವೇಟಿ ಉತ್ಸವ ಸಡಗರದಿಂದ ನಡೆಯಿತು. ಸ್ವಾಮಿಯ ಉತ್ಸವ ಮೂರ್ತಿಯನ್ನು ಪಾರ್ವೇಟಿ ಮಂಟಪಕ್ಕೆ ಕರೆತಂದ ಮೇಲೆ ಸಂಪ್ರದಾಯದಂತೆ ಪಾರ್ವೇಟಿ ಉತ್ಸವ ನಡೆಯಿತು. ಯಾತ್ರಿಕರು ಉತ್ಸವಕ್ಕೆ ಬರಲೆಂದು ಮಂಟಪಕ್ಕೆ ಉಚಿತ ಬಸ್ ಸೌಲಭ್ಯವನ್ನು ಕಲ್ಪಿಸಲಾಗಿದ್ದಿತು. ದೊಡ್ಡ ಸಂಖ್ಯೆಯಲ್ಲಿ ಭಕ್ತರು ಪಾಲುಗೊಂಡ ಈ ಉತ್ಸವದಲ್ಲಿ ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶಕುಮಾರ್, ಸ್ಪೆಷಲ್‌ಗ್ರೇಡ್ ಡೆ.ಇ.ಓ. ಶ್ರೀ ವಾಸುದೇವನ್, ಎ. ಎಸ್. ಓ. ಡಾ|| ಜನಾರ್ದನ ನಾಯುಡು ಮೊದಲಾದವರು ಭಾಗವಹಿಸಿದ್ದರು.



## ನೂತನ ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್

ತಿ. ತಿ. ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿ ಸ್ಥಾನಕ್ಕೆ ಆಂಧ್ರಪ್ರದೇಶದ ಸರ್ಕಾರ ಭೂಕಂದಾಯ ಇಲಾಖೆಯ ಕಾರ್ಯದರ್ಶಿಯಾಗಿ ಕೆಲಸ ನಿರ್ವಹಿಸುತ್ತಿದ್ದ ಶ್ರೀ ಎನ್. ರಮೇಶ್‌ಕುಮಾರ್ ಐ.ಎ.ಎಸ್. ಅವರನ್ನು ನೇಮಕಮಾಡಿದೆ.

ಇದುವರೆಗೆ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಗಳಾಗಿ ಕೆಲಸ ನಿರ್ವಹಿಸುತ್ತಿದ್ದ ಶ್ರೀ ಡಿ.ವಿ.ಎಲ್. ಎನ್. ಮೂರ್ತಿ ಐ.ಎ.ಎಸ್. ಅವರನ್ನು ಸ್ಟಾಂಪ್ಸ್ ಹಾಗೂ ದಾಖಲಾತಿ ಇಲಾಖೆಯ ಐ.ಜಿ.ಯನ್ನಾಗಿ ವರ್ಗಾಯಿಸಲಾಗಿದೆ.

ಹೊಸದಾಗಿ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಗಳಾಗಿ ನೇಮಕವಾಗಿರುವ ಶ್ರೀ ಎನ್. ರಮೇಶ್‌ಕುಮಾರ್ ಅವರು ಈ ಹಿಂದೆ ತಿ.ತಿ.ದೇ. ಗಳ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿಗಳಾಗಿ ಕೆಲಸ ಮಾಡಿ ದೇವಾಲಯದ, ಯಾತ್ರಿಕರ ಸಮಸ್ಯೆಗಳನ್ನೂ ಸಂದರ್ಭೋಚಿತ ಪರಿಹಾರಗಳನ್ನೂ ತಿಳಿದವರೇ ಆಗಿದ್ದಾರೆ, ಹಾಗಾಗಿ ಅವರಿಂದ ಯಾತ್ರಿಕರು ಹೆಚ್ಚಿನ ಅನುಕೂಲಗಳನ್ನು ನಿರೀಕ್ಷಿಸಬಹುದಾಗಿದೆ.

ಶ್ರೀಯುತರು ಶನಿವಾರ ಜನವರಿ 8 ರಂದು ಬೆಳಗ್ಗೆ 11.30ಕ್ಕೆ ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದ ಬಂಗಾರದ ಬಾಗಿಲ ಬಳಿ ತಮ್ಮ ಪದವಿ ಬಾಧ್ಯತೆಯನ್ನು ಸ್ವೀಕರಿಸಿದರು. ತಿ.ತಿ.ದೇ. ಧರ್ಮಕರ್ತರ ಮಂಡಳಿಯ ಪದಮಿತ್ತ ಸದಸ್ಯ ಹಾಗೂ ಕಾರ್ಯದರ್ಶಿ ಹುದ್ದೆಯ ಪ್ರಮಾಣ ವಚನವನ್ನು ತಿ.ತಿ.ದೇ. ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ.ಎಚ್. ಸತ್ಯನಾರಾಯಣ ಅವರು ನೀಡಿದರು. ರಂಗನಾಯಕ ಮಂಟಪದಲ್ಲಿ ಅವರಿಗೆ ವೇದಾಶೀರ್ವಚನ ನೀಡಲಾಯಿತು ತಿ.ತಿ.ದೇ. ಅಧ್ಯಕ್ಷರು ಶ್ರೀಯುತರಿಗೆ ಪ್ರಸಾದವನ್ನು ನೀಡಿದರು.

## ಮಾದರಿ ಧರ್ಮಕ್ಷೇತ್ರಗಳಾಗಿ ತಿರುಮಲೆ ತಿರುಪತಿಗಳ ಅಭಿವೃದ್ಧಿ

ಆಂಧ್ರಪ್ರದೇಶದ ಅರ್ಥಶಾಖಾ ಮಂತ್ರಿ ಶ್ರೀ ಎನ್. ಚಂದ್ರಬಾಬು ನಾಯುಡು ಅವರು ತಿರುಮಲೆ ತಿರುಪತಿಗಳನ್ನು ಜಗತ್ತಿಗೇ ಮಾದರಿ ಧರ್ಮಕ್ಷೇತ್ರಗಳಂತೆ ಅಭಿವೃದ್ಧಿ ಪಡಿಸಲಾಗುವುದು. ಇದಕ್ಕಾಗಿ ಎಲ್ಲ ಪ್ರಜಾ ಪ್ರತಿನಿಧಿಗಳೂ ತಿ.ತಿ.ದೇ. ಆಡಳಿತದೊಡನೆ ಸಹಕರಿಸಬೇಕು ಎಂದು ಕರೆನೀಡಿದ್ದಾರೆ.

ಶ್ರೀಯುತರು ತಿರುಮಲೆಗೆ ಆಗಮಿಸಿ ಸ್ವಾಮಿದರ್ಶನ ಪಡೆದ ನಂತರ ಪರ್ತಕರ್ತರ ಸಮಾವೇಶದಲ್ಲಿ ಮಾತನಾಡುತ್ತ ಮೇಲಿನಂತೆ ನುಡಿದರು ಕ್ಯೂಕಾಂಪ್ಲೆಕ್ಸ್ ಮೂಲಕ ದೇವಾಲಯವನ್ನು ಸೇರಿದ ಅವರನ್ನು ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ. ವಿ. ಎಲ್.ಎನ್. ಮೂರ್ತಿ, ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ಸತ್ಯನಾರಾಯಣ ಮೊದಲಾದವರು ಘನವಾಗಿ ಸ್ವಾಗತಿಸಿದರು. ಸ್ವಾಮಿ ದರ್ಶನಾನಂತರ ಶ್ರೀಯುತರಿಗೆ ಶಾಲುವನ್ನು ಹೊದಿಸಿ ಸತ್ಕರಿಸಿ, ಪ್ರಸಾದ ನೀಡಲಾಯಿತು. ವೇದಪಂಡಿತರು ವೇದಾಶೀರ್ವಾದ ನೀಡಿದರು.

ತಿರುಮಲೆಗೆ ಬರುವ ಯಾತ್ರಿಕರಿಗೆ ಮತ್ತಷ್ಟು ಸೌಲಭ್ಯಗಳನ್ನು ಒದಗಿಸಿ, ಯಾತ್ರಿಕರು ಎರಡುದಿನ ಇರಬೇಕು ಎನ್ನುವಂತೆ ವಸತಿ ಸೌಕರ್ಯ ಆಗಬೇಕಿದೆಯೆಂದೂ, ಆಲಯದಲ್ಲಿ ಸಂಪ್ರದಾಯಾನುಸಾರವಾಗಿಯೇ ನಡೆಯಬೇಕೆಂದೂ ಅವರು ನುಡಿಯುತ್ತ ಇದಕ್ಕಾಗಿ ತಮ್ಮ ಸರ್ಕಾರ ಬದ್ಧ ಕಂಕಣವಾಗಿದೆಯೆಂದೂ ನುಡಿದರು.

## ಕಾರ್ಯನಿರ್ವಹಣಾಧಿಕಾರಿಗಳಿಗೆ ಬೀಳ್ಕೊಡುಗೆ -- ಸ್ವಾಗತ

ತಿರುಮಲೆ ತಿರುಪತಿ ದೇವಸ್ಥಾನಗಳ ಉದ್ಯೋಗಿಗಳ ಹತ್ತು ಹಲವು ಸಂಘಗಳ ವತಿಯಿಂದ ಜನವರಿ 9 ರಂದು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಯಾಗಿ ಕೆಲಸ ಮಾಡಿ ವರ್ಗಾವಣೆ ಹೊಂದಿದ ಶ್ರೀ ಡಿ. ವಿ. ಎಲ್. ಎನ್. ಮೂರ್ತಿ ಅವರಿಗೆ ಬೀಳ್ಕೊಡುಗೆಯೂ, ಹೊಸದಾಗಿ ಕಾರ್ಯನಿರ್ವಹಣಾಧಿಕಾರಿಯಾಗಿ ಪದವಿ ಸ್ವೀಕರಿಸಿದ ಶ್ರೀ ಎನ್. ರಮೇಶಕುಮಾರ್ ಅವರಿಗೆ ಸ್ವಾಗತವೂ, ತಿ.ತಿ.ದೇ. ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ. ಎಚ್. ಸತ್ಯನಾರಾಯಣ ಅವರ ಅಧ್ಯಕ್ಷತೆಯ ಸಮಾರಂಭದಲ್ಲಿ ನಡೆದವು.

ನಲವತ್ತಾರಕ್ಕೂ ಮಿಕ್ಕಿದ ವಿವಿಧ ಸಂಘ ಸಂಸ್ಥೆಗಳು ಶ್ರೀ ಡಿ. ವಿ. ಎಲ್. ಎನ್. ಮೂರ್ತಿ ಅವರನ್ನು ಪುಷ್ಪಹಾರದಿಂದ, ಶಾಲುವಿನಿಂದ, ಜ್ಞಾಪಿಕೆಗಳಿಂದ ಸತ್ಕರಿಸಿ ಬೀಳ್ಕೊಟ್ಟರು. ಅದೇ ರೀತಿಯ ಹಾರ್ದಿಕ ಸ್ವಾಗತವನ್ನು ಶ್ರೀ ರಮೇಶಕುಮಾರರಿಗೆ ಬಯಸಿದರು. ಕಾರ್ಮಿಕ ಸಂಕ್ಷೇಮಾಧಿಕಾರಿ ಶ್ರೀ ವೆಂಕಟರಮಣರೆಡ್ಡಿ ಅವರ ಸ್ವಾಗತ ನಡದ ಸಭೆಯಲ್ಲಿ ಮಾತನಾಡಿದ ಶ್ರೀ ಡಿ. ವಿ. ಎಲ್. ಎನ್. ಮೂರ್ತಿ ಅವರು ತಮ್ಮ ಪದವಿಕಾಲದಲ್ಲಿ ತಿ.ತಿ.ದೇ. ಉದ್ಯೋಗಿಗಳು ಹೆಚ್ಚಿನ ಸಹಕಾರ ಸೌಹಾರ್ದಗಳನ್ನು ನೀಡಿ ದೇವಾಲಯದ ಯೋಜನೆಗಳಲ್ಲಿ ಉತ್ಸಾಹದಿಂದ ಪಾಲುಗೊಂಡರೆಂದು ಶ್ಲಾಘಿಸಿ, ತಿರುಪತಿ ತಿರುಮಲೆಗಳನ್ನು ಆದರ್ಶ ತೀರ್ಥಕ್ಷೇತ್ರವಾಗಿ ತಿದ್ದುವ ಮಹಾನ್ ಕಾರ್ಯದಲ್ಲಿ ಇನ್ನೂ ಹೆಚ್ಚಿನ ಸಹಕಾರವನ್ನು ಉದ್ಯೋಗಿಗಳು ನೀಡಬೇಕೆಂದು ಕರೆಯಿತ್ತರು. ಉದ್ಯೋಗಿಗಳ ಸ್ವಾಗತವನ್ನು ಸ್ವೀಕರಿಸಿದ ಶ್ರೀ ಎನ್. ರಮೇಶಕುಮಾರ್ ಅವರು ಶ್ರೀ ಡಿ. ವಿ. ಎಲ್. ಎನ್. ಮೂರ್ತಿಯವರು ಪರಿಪೂರ್ಣತೆಯನ್ನು ಸಾಧಿಸಿದ ಹಿರಿಯರು ಎಂದು ಹೇಳುತ್ತ ಯಾತ್ರಿಕರ ಹಾಗೂ ಸ್ವಾಮಿಯ ಸೇವೆಯಲ್ಲಿ ಅವರ ಹಾದಿಯಲ್ಲಿಯೇ ತಾವೂ ಮುಂದುವರೆಯಬೇಕೆಂದೂ, ಇನ್ನೂ ದೀರ್ಘದೂರವನ್ನು ಕ್ರಮಿಸಬೇಕಾಗಿರುವುದರಿಂದ ಪ್ರತಿಯೊಬ್ಬರೂ ಸಹಕಾರ ನೀಡಬೇಕೆಂದೂ ಕಳಕಳಿಯಿಂದ ಕರೆನೀಡಿದರು.

ಸಮಾರಂಭದಲ್ಲಿ ಆಂಧ್ರಪ್ರದೇಶ ಟಿ. ಎನ್. ಟಿ. ಯು. ಸಿ. ನಾಯಕ ಶ್ರೀ ಕೆ. ಗೋಪಾಲ್, ಕಾರ್ಮಿಕ ಉದ್ಯೋಗಿ ಸಮಾಖ್ಯೆಯ ಕಾರ್ಯದರ್ಶಿ ಶ್ರೀ ಚಂದ್ರಶೇಖರನಾಯುಡು, ಸೂಪರಿಂಟೆಂಡೆಂಟ್ಸ್ ಸಂಘದ ಅಧ್ಯಕ್ಷರು ಶ್ರೀ ಆರ್. ವೆಂಕಟರಮಣಾ ರೆಡ್ಡಿ, ಜೆ. ಸಿ. ಎ. ಅಧ್ಯಕ್ಷರು ಶ್ರೀ ಚೆಂಗಾರೆಡ್ಡಿ, ಇ.ಯು.ಎ.ಓ. ಅಧ್ಯಕ್ಷರು ಶ್ರೀ ಸಿ. ರಮಣ ಮೊದಲಾದ ಉದ್ಯೋಗಿಗಳ ವಿವಿಧ ಸಂಘಗಳ ಹಿರಿಯರು ಮಾತನಾಡಿದರು.

## ತಿರುಮಲೆಗೆ ಶ್ರೀಮತಿ ಲಕ್ಷ್ಮೀಪಾರ್ವತಿ

ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್.ಟಿ. ರಾಮರಾವ್ ಅವರ ಸತೀಮಣಿ ಶ್ರೀಮತಿ ಲಕ್ಷ್ಮೀ ಪಾರ್ವತಿ ಅವರು ಡಿಸೆಂಬರ್ 26 ರಂದು ತಿರುಪತಿಗೆ ಆಗಮಿಸಿ 27 ರಂದು ಮಂಗಳವಾರ ಕಾಲು ಹಾದಿಯಲ್ಲಿ ಬೆಟ್ಟವನ್ನು ಹತ್ತಿ ತಿರುಮಲೆಯನ್ನು ಸೇರಿದರು. ವೈಕುಂಠಂ ಕ್ಯೂಕಾಂಪ್ಲೆಕ್ಸ್ ಮೂಲಕ ದೇವಾಲಯವನ್ನು ಅವರು ಸೇರಿದಾಗ ಅಲ್ಲಿ ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ.ವಿ.ಎಲ್.ಎನ್. ಮೂರ್ತಿ, ಜೆ.ಇ.ಓ. ಸತ್ಯನಾರಾಯಣ ಮೊದಲಾದವರು ಸ್ವಾಗತ ಬಯಸಿದರು. ಆಲಯದಲ್ಲಿ ಸ್ವಾಮಿಯನ್ನು ಆರಾಧಿಸಿದ ನಂತರ ಅವರಿಗೆ ವೇದಾಶೀರ್ವಚನ ನೀಡಲಾಯಿತು.

ಶ್ರೀಮತಿ ಲಕ್ಷ್ಮೀಪಾರ್ವತಿ ಅವರೊಡನೆ ಆಂಧ್ರಪ್ರದೇಶದ ಉನ್ನತ ಶಿಕ್ಷಣ ಇಲಾಖಾಮಂತ್ರಿ ಶ್ರೀ ಗಾಲಿ ಮುದ್ದುಕೃಷ್ಣಮ ನಾಯುಡು, ಗೃಹಶಾಖಾ ಮಂತ್ರಿ ಶ್ರೀ ಇಂದ್ರಾರೆಡ್ಡಿ ಮತ್ತಿತರ ಎಂ.ಎಲ್.ಎ. ಗಳೂ ಇದ್ದರು.

## ಮಂಡಿಯಲ್ಲಿ ಬೆಟ್ಟದ ಆರೋಹಣ

ತಿ. ತಿ. ದೇವಸ್ಥಾನಗಳಲ್ಲಿ ಗುಮಾಸ್ತರಾಗಿ ಕೆಲಸಮಾಡುತ್ತಿರುವ ಶ್ರೀ ಬಾಲಾಜಿ ಅವರು ಶ್ರೀ ವೆಂಕಟೇಶ್ವರಸ್ವಾಮಿಯ ದರ್ಶನಕ್ಕಾಗಿ ಅಲಿಪಿರಿ ಮೆಟ್ಟಿಲ ಮಾರ್ಗವಾಗಿ ಮೊಣಕಾಲಿನಲ್ಲಿಯೇ ನಡೆದು ಬೆಟ್ಟವನ್ನೇರಿ ಸ್ವಾಮಿದರ್ಶನ ಪಡೆದರು. ಹಿಂದೆ ಇತಿಹಾಸದಲ್ಲಿ ಶ್ರೀ ರಾಮಾನುಜಾಚಾರ್ಯರಾದಿಯಾಗಿ ಹಿರಿಯರು ನಡೆದ ರೀತಿಯಲ್ಲಿಯೇ ತಾವೂ ನಡೆದದ್ದಾಗಿಯೂ, ಮಂಡಿಯೂರಿ ಮುಂದುವರೆಯುವುದು ಸ್ವಲ್ಪ ಕಷ್ಟವೇ ಆದರೂ ಸ್ವಾಮಿಯ ನಾಮ ಸಂಕೀರ್ತನ ಶಕ್ತಿಯಿಂದ ತಾವು ಈ ಕಾರ್ಯದಲ್ಲಿ ಸಫಲರಾದುದಾಗಿಯೂ ಶ್ರೀಯುತರು ತಿಳಿಸಿದ್ದಾರೆ. ಹಳದಿ ವಸ್ತ್ರವನ್ನುಟ್ಟು ತಿರುನಾಮ ಧರಿಸಿ ಸ್ವಾಮಿ ನಾಮ ಘೋಷ ಮಾಡುತ್ತ ಶ್ರೀಯುತರು 20 ಗಂಟೆಯಲ್ಲಿ ಮಂಡಿಯೂರಿ ನಡೆದು ದೇವಾಲಯವನ್ನು ಸೇರಿದರು.

ಈ ವರೆಗೆ ಶ್ರೀ ಬಾಲಾಜಿಯವರು ಪ್ರತಿ ಶನಿವಾರವೂ ತಪ್ಪದೆ 131 ಶನಿವಾರಗಳಲ್ಲಿ ನಡೆದು ಬೆಟ್ಟವನ್ನು ಸೇರಿದ್ದರೆ, ಒಮ್ಮೆ ಉರುಳು ಸೇವೆಯಲ್ಲಿ ಪರ್ವತಾರೋಹಿಸಿ ದೇವಾಲಯವನ್ನು ತಲುಪಿದ್ದರು.

ಅವರ ಭಕ್ತಿ ಇತರರಿಗೆ ಮಾರ್ಗದರ್ಶಕವಾಗಲಿ ಎಂಬ ಉದ್ದೇಶದಿಂದ ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶಕುಮಾರ್ ಅವರು ಶ್ರೀಯುತರನ್ನು ತಿರುಮಲೆಯ ದೇವಾಲಯಕ್ಕೆ ಅವರ ಸೇವಾವೃತ್ತಿಯನ್ನು ವರ್ಗಾಯಿಸಿದ್ದಾರೆ.

## ವೈಭವದ ವೈಕುಂಠ ಏಕಾದಶಿ

ಜನವರಿ 12 ರಂದು ಗುರುವಾರ ತಿರುಮಲೆಯಲ್ಲಿ ವೈಕುಂಠ ಏಕಾದಶಿ ಉತ್ಸವ ವೈಭವದಿಂದ ನಡೆಯಿತು.

ವೈಕುಂಠ ಏಕಾದಶಿ ಸಂದರ್ಭದಲ್ಲಿ ಗುರುವಾರ ಬೆಳಗ್ಗೆ 4 ಗಂಟೆಗೇ ಸ್ವಾಮಿಯ ಸರ್ವದರ್ಶನ ಆರಂಭವಾಗಿ ಸಂಜೆ 6 ರ ಹೊತ್ತಿಗೆ 60,000 ಮಂದಿ ಸ್ವಾಮಿಯನ್ನು ದರ್ಶಿಸಿದರು. ಮತ್ತೂ 20 ಸಾವಿರ ಮಂದಿಯ ದರ್ಶನ ನಂತರ ಆಯಿತು.

ಅಂದು ಬೆಳಗ್ಗೆ 9 ಗಂಟೆಗೆ ಸ್ವಾಮಿಯ ಉತ್ಸವ ಮೂರ್ತಿಯನ್ನು ಶ್ರೀದೇವಿ ಭೂದೇವಿ ಸಹಿತವಾಗಿ ಚಿನ್ನದ ರಥದಲ್ಲಿ ಊರಮೆರವಣಿಗೆಯಲ್ಲಿ ಕರೆತರಲಾಯಿತು. ಸುಮಾರು ಮೂವತ್ತು ಸಾವಿರಕ್ಕೂ ಹೆಚ್ಚು ಮಂದಿ ಸ್ವರ್ಣರಥಾರೂಢ ಸ್ವಾಮಿಯನ್ನು ದರ್ಶಿಸಿದರು.

ಯಾತ್ರಿಕರ ಹೆಚ್ಚಿದ ಸಂದಣಿಗೆ ತಕ್ಕಂತೆ ಅವರ ಸರಾಗದರ್ಶನದ ಏರ್ಪಾಡುಗಳನ್ನು ವ್ಯಾಪಕವಾಗಿ ಮಾಡಲಾಗಿದ್ದಿತು. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶಕುಮಾರ್, ಸಿ.ಎಸ್.ಓ. ಶ್ರೀ ಎಸ್. ಎಲ್.ವಿ. ನಾರಾಯಣ ಮೊದಲಾದವರು ವ್ಯವಸ್ಥೆಯ ಸಕ್ರಮ ನಿರ್ವಹಣೆಗೆ ತಕ್ಕ ಬಂದೋಬಸ್ತು ಮಾಡುತ್ತ ಅಲ್ಲಿಂದಲ್ಲಿಗೆ ಆಗಾಗ ಆಗಮಿಸಿ ಸಲಹೆ ಸೂಚನೆಗಳನ್ನು ನೀಡುತ್ತ ಎಲ್ಲ ಸುಸೂತ್ರವಾಗಿ ನಡೆಯುವಂತೆ ನೋಡಿಕೊಂಡರು.

ಅಂದಿನ ಆದಾಯ (ಚಿಲ್ಲರೆ ನಾಣ್ಯಗಳ ಹೊರತು) 33,00,000 ರೂ. ಎಂದು ವರದಿಯಾಗಿದೆ. ಯಾತ್ರಿಕರ ಪ್ರಯೋಜನಕ್ಕಾಗಿ ಹಲವಾರು ಕಡೆ ತಿ.ತಿ.ದೇ. ಕ್ಯಾಲೆಂಡರ್‌ಗಳು, ಡೈರಿಗಳ ಮಾರಾಟದ ಏರ್ಪಾಡೂ ಆಗಿದ್ದಿತು.




## ಉಡುಪಿಯಲ್ಲಿ ಸಂಭ್ರಮದ ಗೀತಾ ಜಯಂತಿ

ಶ್ರೀಕೃಷ್ಣ ಕ್ಷೇತ್ರ ಉಡುಪಿಯಲ್ಲಿ ಗೀತಾ ಜಯಂತಿಯನ್ನು ತಾ. 13-12-94 ರಂದು ಬಹಳ ಅದ್ದೂರಿಯಿಂದ ಆಚರಿಸಲಾಯಿತು.

ಈಗಾಗಲೇ ಪರ್ಯಾಯ ಶ್ರೀಗಳಾದ ಶ್ರೀ ಲಕ್ಷ್ಮೀವರ ತೀರ್ಥರಿಂದ ತನ್ನ 300 ನೇ ವಿಶೇಷ ಅಲಂಕಾರಕ್ಕಾಗಿ ತಾ. 27-11-94 ರಂದು ಅರ್ಪಿಸಲ್ಪಟ್ಟ ಸ್ವರ್ಣ ರಥದಲ್ಲಿ ಶ್ರೀಕೃಷ್ಣ ಪಾರ್ಥಸಾರಥಿ ಗೀತಾಚಾರ್ಯ ಶ್ರೀಕೃಷ್ಣನಾಗಿ ಮತ್ತೊಮ್ಮೆ ಅಲಂಕೃತಗೊಂಡು, ಭಕ್ತಜನರ ಮೇಲೆ ತನ್ನ ಕೃಪಾಶೀರ್ವಾದ ಬೀರಿದ.

ಅಂದು ಸಂಜೆ ನಡೆದ ಬೃಹತ್ಸಭೆಯ ಅಧ್ಯಕ್ಷರಾದ ಪರ್ಯಾಯ ಶ್ರೀಗಳಾದ ಶ್ರೀ ಲಕ್ಷ್ಮೀವರ ತೀರ್ಥರು ಉಡುಪಿಯಲ್ಲೇ ಆರಂಭಗೊಂಡ ರಾಷ್ಟ್ರೀಕೃತ ಕಾರ್ಪೊರೇಶನ್ ಬ್ಯಾಂಕಿನ ಡೆಪ್ಯುಟಿ ಜನರಲ್ ಮೆನೇಜರ್, ಶ್ರೀ ವಿಜಯನಾಥ ಭಟ್ಟರು ರಚಿಸಿದ "ವಿಜಯಿನಿ" ಎಂಬ ಭಗವದ್ಗೀತೆಯ ಕನ್ನಡ ಅನುವಾದವನ್ನು ಬಿಡುಗಡೆಗೊಳಿಸಿದರು. ಈ ಕೃತಿಯಲ್ಲಿ ಭಗವದ್ಗೀತೆಯ ಸಂಸ್ಕೃತ ಶ್ಲೋಕಗಳನ್ನು ಸರಳ ಚೌಪದಿ ಪದ್ಯಗಳಲ್ಲಿ ಕನ್ನಡಕ್ಕೆ ಅನುವಾದಿಸಲಾಗಿದೆ.

ಪುತ್ತಿಗೆ ಮಠದ ಶ್ರೀ ಶ್ರೀ ಸುಗುಣೇಂದ್ರ ತೀರ್ಥರು ಮುಖ್ಯ ಅತಿಥಿಗಳಾಗಿ ಮಾತನಾಡುತ್ತಾ ಶ್ರೀಕೃಷ್ಣನನ್ನು ನಮ್ಮ ಹೃದಯದಲ್ಲಿ ಭಕ್ತಿಯಿಂದ ಪ್ರಾರ್ಥಿಸಿ ನಿಲ್ಲಿಸಿದಾಗಲೇ ನಾವು ಜೀವನದಲ್ಲಿ ಅಪಾರ ಉತ್ಕರ್ಷ ಹೊಂದಬಹುದೆಂದರು.

ಪರ್ಯಾಯ ಸ್ವಾಮಿಗಳಾದ ಶ್ರೀ ಶ್ರೀ ಲಕ್ಷ್ಮೀವರ ತೀರ್ಥ ಶ್ರೀಪಾದರು, ವಿಜಯಿನಿಯ ಲೇಖಕರಾದ ಶ್ರೀ ವಿಜಯನಾಥಭಟ್ಟರನ್ನು ಪುಸ್ತಕದ ಮುದ್ರಕರಾದ ಬಿ. ಆರ್. ಪೈಗಳನ್ನು ಇನ್ನೋರ್ವ ಮುಖ್ಯ ಅತಿಥಿಗಳಾದ ನಿ. ಶ್ರೀ ಬಲ್ಲಾಳರನ್ನು ಶಾಲು ಹೊದಿಸಿ ಸನ್ಮಾನಿಸಿದರು. ಹಾಗೂ ಶ್ರೀ ವಿಜಯನಾಥ ಭಟ್ಟರಿಂದ ಇನ್ನೂ ಇಂತಹಾ ಉತ್ತಮ ಕೃತಿಗಳು ಹೊರಬರಲಿ ಎಂದು ಆಶೀರ್ವದಿಸಿದರು.

ಸಭಾಕಾರ್ಯಕ್ರಮದ ಬಳಿಕ ಬೆಂಗಳೂರಿನ ಸಂಗೀತ ನೃತ್ಯ ಅಕಾಡಮಿಯ ಪ್ರಾಚಾರ್ಯರಾದ ಭರತ ನಾಟ್ಯ ಹಾಗೂ ಮೋಹಿನಿ ಅಟ್ಟಂ ಕಲಾವಿದೆ, ಶ್ರೀಮತಿ ಇಂದಿರಾ ಕಡಂಬಿಯವರಿಂದ ಭರತನಾಟ್ಯ ಕಾರ್ಯಕ್ರಮ ನಡೆಯಿತು. ಕೃಷ್ಣಾಷ್ಟೋತ್ತರದ ಶ್ಲೋಕಗಳನ್ನು ಪದ್ಯರೂಪದಲ್ಲಿ ಹಾಡಿದಾಗ, ಇವರ ನೃತ್ಯ ಅದರಲ್ಲೂ "ಪೂತನಾಜೀವಿತಹರಃ ಶಕಟಾಸುರ ಭಂಜನಃ" ಮತ್ತು "ವಿದುರಾಕ್ರೂರವರದೋ, ವಿಶ್ವರೂಪ ಪ್ರದರ್ಶನಃ" ಹಾಗೂ "ಪಾರ್ಥಸಾರಥಿರ್‌ವ್ಯಕ್ತೋ" "ಕಾಳೀಯ ಫಣಿಮಾಣಿಕ್ಯರಂಜಿತ ಶ್ರೀಪದಾಂಬುಜಃ" ಎಂಬ ಸನ್ನಿವೇಶದಲ್ಲಿ ಶ್ರೀಮತಿ ಇಂದಿರಾ ಕಡಂಬಿಯವರ ಹೆಜ್ಜೆಗಾರಿಕೆ, ಕರವಿನ್ಯಾಸ, ಮುಖಾಭಿನಯ, ಹಾವಭಾವ ಅದ್ಭುತ ರಮ್ಯವಾಗಿತ್ತು.

ಚಿತ್ರದಲ್ಲಿ ಪುತ್ತಿಗೆ ಮಠದ ಗೀತಾಮಂದಿರದ ನಿರ್ಮಾತ ಶ್ರೀ ಶ್ರೀ ಸುಗುಣೇಂದ್ರ ತೀರ್ಥ ಶ್ರೀಪಾದರನ್ನೂ, ವಿಜಯಿನಿ ಪುಸ್ತಕ ಬಿಡುಗಡೆ ಮಾಡುತ್ತಿರುವ ಗೀತಾಚಾರ್ಯ ಪಾರ್ಥಸಾರಥಿ ಕೃಷ್ಣನಿಗೆ 300ನೇ ವಿಶೇಷ ಅಲಂಕಾರಕ್ಕಾಗಿ ಸುವರ್ಣರಥವನ್ನರ್ಪಿಸಿದ ಪರ್ಯಾಯ ಶ್ರೀಪಾದರನ್ನೂ ಮುಖ್ಯ ಅತಿಥಿಗಳಾದ ನಿ. ಶ್ರೀಶ ಬಲ್ಲಾಳರನ್ನೂ "ವಿಜಯಿನಿ" ಕರ್ತೃ ಶ್ರೀ ವಿಜಯನಾಥ ಭಟ್ಟರನ್ನೂ ಹಾಗೂ ಮುದ್ರಕ ಶ್ರೀ ಟಿ. ಆರ್. ಪೈಗಳನ್ನೂ ಎಡದಿಂದ ಬಲಕ್ಕೆ ಗಮನಿಸಬಹುದು.

## "ಉಡುಪಿ ಕೃಷ್ಣನು ಪಾರ್ಥಸಾರಥಿ ಕೃಷ್ಣನಾಗಿ ಅಲಂಕೃತನಾದಾಗ"



ಪ್ರಸಕ್ತ ಪರ್ಯಾಯ ಶ್ರೀ ಶಿರೂರು ಮಠದ 30ನೇ ಸ್ವಾಮಿಗಳಾದ 30ರ ಹರೆಯದ ತರುಣ ಯತಿ, ಶ್ರೀ ಲಕ್ಷ್ಮೀವರ ತೀರ್ಥ ಶ್ರೀಪಾದರು, ಕಡೆ ಗೋಲ ಕೃಷ್ಣನನ್ನು, ಭಾರತೀಯ ಪುರಾಣ ಹಾಗೂ ಶಾಸ್ತ್ರಗಳ ಹಿನ್ನೆಲೆಯಲ್ಲಿ ವಿವಿಧ ರೂಪಗಳ ಲ್ಲಿ, ಮತ್ತು ಅವತಾರಗಳಲ್ಲಿ ಅಲಂಕರಿಸುವುದರಲ್ಲಿ ಸಿದ್ಧ ಹಸ್ತರು. ತಾ. 18-1-94 ರಂದು ಎರಡನೆಯ ಬಾರಿಗೆ ಪರ್ಯಾಯ ಪೀಠವನ್ನೇರಿದ ಶ್ರೀ ಲಕ್ಷ್ಮೀ ವರ ತೀರ್ಥ ಶ್ರೀಪಾದರು ಕಡಗೋಲ ಶ್ರೀಕೃಷ್ಣ ನನ್ನು 299 ವಿವಿಧ ಪೌರಾಣಿಕ ಸನ್ನಿವೇಶಗಳಿಗೆ ಹೊಂದುವಂತೆ ಈಗಾಗಲೇ ಕಲಾತ್ಮಕವಾಗಿ ಅಲಂ ಕರಿಸಿ, ಇದೀಗ 300ನೇ ಅಲಂಕಾರವನ್ನು ಪಾರ್ಥ ಸಾರಥಿ ಗೀತಾಚಾರ್ಯ ರಥಾರೂಢ ಶ್ರೀಕೃಷ್ಣನಾಗಿ ವಿದ್ಯುಕ್ತವಾಗಿ ತಾ. 27-11-1994 ರಂದು ಅಲಂ ಕರಿಸಿ, ಆಕರ್ಷಕ ಮೂರ್ತಿಯಾದ ಬಾಲಕೃಷ್ಣನ ಆಕರ್ಷಣೆಯನ್ನು ಇಮ್ಮಡಿಗೊಳಿಸಿದ್ದಾರೆ. ಎಂಟು ಕಿಲೋ ಚಿನ್ನ, ಹಾಗೂ 22 ಕಿಲೋ ಬೆಳ್ಳಿಯಿಂದ ನಿರ್ಮಿತವಾದ ಈ ರಥದ ನಿರ್ಮಾಣಕ್ಕೆ ಸುಮಾರು ರೂ. 45 ಲಕ್ಷ ವೆಚ್ಚ ತಗಲಿದೆ. ಶ್ರೀಮಠದ ಹಾಗೂ ಭಕ್ತರ ನೆರವಿನಿಂದ ಶ್ರೀ ರಥದ ನಿರ್ಮಾಣವನ್ನು ಸ್ವಾಮಿಗಳು ತಾವು ಪರ್ಯಾಯ ಪೀಠಾರೂಢರಾದ ಅಲ್ಪ ಕಾಲದಲ್ಲಿಯೇ ಸಮರ್ಪಿಸಿದ್ದನ್ನು ನೋಡಿದರೆ, ಇವರು ಸಂಕಲ್ಪಸಿದ್ಧರು ಹಾಗೂ ಶ್ರೀಕೃಷ್ಣಮುಖ್ಯ ಪ್ರಾಣರ ವಿಶೇಷಾನುಗ್ರಹಕ್ಕೆ ಪಾತ್ರರು ಎಂದು ಬೇರೆ ಹೇಳಬೇಕಾಗಿಲ್ಲ.

ಕಡೆಗೋಲಕೃಷ್ಣನ ಉತ್ಸವಮೂರ್ತಿಯನ್ನು ಫಲಿ ಮಾರು ಮಠದ ಹಿರಿಯ ಸ್ವಾಮಿಗಳಾದ ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥರು ಹಿಂದೆ ತಮ್ಮ 2ನೇ ಪರ್ಯಾಯ ಕಾಲದಲ್ಲಿ (1986-88) ಸ್ವರ್ಣರಥ ದಲ್ಲಿ ಕೂಡಿಸಿದ್ದರೂ, ಆಚಾರ್ಯ ಮಧ್ವ ಪ್ರತಿಷ್ಠಿತ ಶ್ರೀ ಬಾಲಕೃಷ್ಣನ ಮೂಲ ಮೂರ್ತಿಯನ್ನು, ಅವನ ಗರ್ಭಗೃಹದಲ್ಲೇ ರಥಾರೂಢನಾಗಿಸಿದ ಹಿರಿಮೆ ಪರ್ಯಾಯ ಶ್ರೀ ಶ್ರೀ ಲಕ್ಷ್ಮೀವರತೀರ್ಥರದು; ಎಂದು 27-11-94 ರಂದು ನಡೆದ ಬೃಹತ್ ಸಭೆಯನ್ನು ಉದ್ದೇಶಿಸುತ್ತಾ ಪೇಜಾವರ ಮಠದ ಶ್ರೀ ಶ್ರೀ ವಿಶ್ವೇಶ ತೀರ್ಥ ಶ್ರೀಪಾದರು ಘೋಷಿಸಿದರು.

ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದ ಪರ್ಯಾಯ ಶ್ರೀ ಲಕ್ಷ್ಮೀವರ ತೀರ್ಥ ಶ್ರೀಪಾದರು ಭಕ್ತರ ಸಹ ಕಾರ ಹಾಗೂ ಹರಿಗುರುಗಳ ಆಶೀರ್ವಾದದಿಂದ, ಈ ಸುವರ್ಣರಥ ಸಮರ್ಪಣ ಕಾರ್ಯ ಶ್ರೀಕೃ ಷ್ಣನ 300ನೆಯ ವಿಶೇಷ ಅಲಂಕಾರಕ್ಕಾಗಿ ಇಂದು ರ್ಪಿತವಾಗಿದೆ ಎಂದರು. ಇದೇ ರೀತಿ ತಮ್ಮ ಮುಂದಿನ ಯೋಜನೆಯಾದ 160 ಕೊಠಡಿಗಳಿಂದ ಕೂಡಿದ ಸುಮಾರು ರೂ. 5 ಕೋಟಿ ವೆಚ್ಚದಲ್ಲಿ ನಿರ್ಮಿಸಲು ಸಂಕಲ್ಪಿಸಿರುವ 'ಮಧುರಾ ಸತ್ರ'ವನ್ನು ಕೂಡಾ ಭಕ್ತರ ಸಹಕಾರದಿಂದ ಶ್ರೀಕೃಷ್ಣ ಮುಖ್ಯಪ್ರಾ ಣರ ಅನುಗ್ರಹ ಬಲದಿಂದ 27-11-1995 ರಂದು ಆಸ್ತಿಕ ಸಮಾಜದ ಉಪಯೋಗಕ್ಕಾಗಿ ನಿರ್ಮಿಸಿ ಅರ್ಪಿಸುವುದಾಗಿ ಸಭಿಕರ ಪ್ರಚಂಡ ಕರತಾಡನ ವಾಗುತ್ತಿದ್ದಂತೆ ಘೋಷಿಸಿದರು.



## ಮುಂದಿನ ಸಂಚಿಕೆಯಲ್ಲಿ

### ಸಪ್ತಗಿರಿ --- ಮಾರ್ಚ್ 1995

**ದದೀಚಿ**
--ಕೆ. ಕೇಶವನ್

**ವಾದಿರಾಜರು ಚಿತ್ರಿಸಿದ ಉಡುಪಿ**
--ಎಸ್. ಕೆ. ಆಚಾರ್

**ಅಲ್ಪಾಯು -- ಆತ್ಮವಿದ್ಯೆ**
-- ರಘುಸುತ

**ಉಪನಿಷತ್ಸಂದೇಶ.**
--ಎಚ್. ವಿ. ನರಸಿಂಹಮೂರ್ತಿ

**ಕಾಮದಹನ**
--ಅ. ಚಿ. ಜ್ಯೋತಿಷೀ.

**ಜೊತೆಗೇ ಆಕರ್ಷಕವಾದ ಮತ್ತೂ ಹಲವಾರು ಸಾಮಯಿಕ ಲೇಖನಗಳು**

**ತಮ್ಮ ಪ್ರತಿಯನ್ನು ಇಂದೇ ಕಾದಿರಿಸಿ.**

## ತಿಂಗಳಿನ ಮುಖ್ಯದಿನಗಳು

### ಮಾರ್ಚ್ --- 1995

| | | |
|---|---|---|
| 1--3--95 | ಬುಧವಾರ | ತಿರುಕಚ್ಚಿನಂಬಿ ಉತ್ಸವಾರಂಭ. |
| 12--3--95 | ಭಾನುವಾರ | ತಿರುಮಲೆಯಲ್ಲಿ ತೆಪ್ಪೋತ್ಸವಾರಂಭ. ಕುಲಶೇಖರಾಳ್ವಾರ್ ವರ್ಷ ತಿರುನಕ್ಷತ್ರ. |
| 16--3--95 | ಗುರುವಾರ | ತಿರುಮಲೆಯಲ್ಲಿ ತೆಪ್ಪೋತ್ಸವ ಸಮಾಪ್ತಿ. ಹೋಳಿ ಹಬ್ಬ. |
| 22--3--95 | ಬುಧವಾರ | ಶಾಲಿವಾಹನ ಶಕ ಸಂವತ್ಸರಾದಿ. |
| 26--3--95 | ಭಾನುವಾರ | ನಾಗುಲಾಪುರಂ ಶ್ರೀ ವೇದನಾರಾಯಣಸ್ವಾಮಿ. ಸೂರ್ಯಸೇವೆಯಲ್ಲಿ ತೆಪ್ಪೋತ್ಸವಾರಂಭ. |
| 28--3--95 | ಮಂಗಳವಾರ | ನಾಗುಲಾಪುರಂ ಶ್ರೀ ವೇದನಾರಾಯಣಸ್ವಾಮಿ. ಸೂರ್ಯಸೇವೆಯಲ್ಲಿ ತೆಪ್ಪೋತ್ಸವ ಸಮಾಪ್ತಿ. |

Published on behalf of T. T. Devasthanams by N. S. Ramamurthy, M.A., Editor and Printed at T.T.D. Press by P. Mohan Rao, Manager, T.T.D. Press, Tirupati - 517 507

